॥ ಶ್ರೀಕೃಷ್ಣಾಯ ಪರಬ್ರಹ್ಮಣೇ ನಮಃ ॥

ಶ್ರೀಮನ್ಮಹಾಭಾರತದೊಳಗಣ

## ಯಕ್ಷಗಾನ

# ಪಾಂಡವವಿಜಯ.



ಸ್ರಗ್ಧರಾವೃತ್ತ.

ಶ್ರೀಕಂಠಂ ಕೋಟಿಭಾಸ್ವದ್ಘೃಣಿಫಣಿ ಗಣ ಸ | ದ್ಭೂಷಣಂ ಭೀಷಣಾಂಗಂ |
ರಾಕಾಶುಭ್ರಾಂಶುಖಂಡಪ್ರಕಟಿತಮಕುಟಂ | ಭೂತಸಂಘಾತನಾಥಂ ||
ಮಾಕಾಂತಪ್ರಾಣಮಿತ್ರಂ ಮದನಮದಹರಂ | ಹಂಸಮುಗ್ರಂ ಸತೀಶಂ |
ಲೋಕಾಧೀಶಂ ಭಜೇಽಹಂ ಧೃತಭುವನಮಹಾ | ಲಿಂಗರೂಪಂ ಗಿರೀಶಂ ||

ರಾಗ ನಾಟ, ಆದಿತಾಳ.

ಪಾಹಿ ಮಾಂ ಸಂತತಂ । ಜಗದೀಶ ಜನಾರ್ದನ । ಪಾಹಿ ಮಾಂ ಸಂತತಂ ॥ ಪಲ್ಲ ॥ ಪಾಹಿ ಪಂಕಜದಳಾಂಬಕ ಚಿನ್ಮಯ । ಪಾಹಿ ಪಾವನಚರಿತ್ರ ಜಗನ್ಮಯ ॥ ಅನುಪಲ್ಲ ॥ ಚಾರುಚಂದ್ರ ಶತ ಸನ್ನಿಭಮುಖಕಿರಣ । ಖಲಭೀಕರ ಶ್ರೀಕರ । ವಾರಿಜಾಸನಾದ್ಯ ಮರವಿನುತಚರಣ ॥ ಕ್ಷೀರವಾರಿಧಿನಿವಾಸ ದಯಾಕರ । ಮಾರ ಮಾತೃಮುಖಪದ್ಮ ವಿಭಾಕರ ॥ ಪಾಹಿ ಮಾಂ ॥ ೧ ॥ ನೀಲಮೇಘ ಸಮಸುಂದರ ಸುಶರೀರ। ಪೀತಾಂಬರಧರ ವನ। ಮಾಲ ಮಂಗಲ

ಮನೋಹರ ಮಣಿಹಾರ ॥ ಮಾಲಲಾಮ ಮಧುಕೈಟಭ ಸೂದನ । ಕಾಲಕಾಲಸಖ ಕಲ್ಮಷಭೇದನ ॥ ಪಾಹಿ ಮಾಂ ॥ ೨ ॥ ನಾಗರಾಜ ವರದಾಯಕ ನಿರ್ಮರಣ । ಸಚರಾಚರ ಸಂಭೃತ । ನಾಗತಲ್ಪಧೃತ ನವರತುನಾಭರಣ ॥ ಯೋಗರೂಪ ಸಂಹೃತ ನರಕಾಸುರ । ಯೋಗಿ ವಂದ್ಯ ವೈಕುಂಠಪುರೀಶ್ವರ ॥ ಪಾಹಿ ಮಾಂ ॥ ೩ ॥ ॥ ೪ ॥

ರಾಗ ನಾಟಿ, ಝಂಪೆತಾಳ.

ಜಯ ಜಯತು ವೀರ ವಿಘ್ನೇಶ ದುರ್ಜನನಾಶ । ಜಯ ಜಯತು ದೇವ ಗಣನಾಥ ವಿಖ್ಯಾತ ॥ ಜಯ ಜಯತು ಜಯತು ॥ ॥ ಪಲ್ಲ ॥ ಗಗನಮಣಿ ಕೋಟಿ ಸಮಕಿರಣ ಪಾವನ ಚರಣ । ನಗ ಸುತೆಯ ಸುಕುಮಾರ ಮಾರಶರದೂರ ॥ ೧ ॥ ಶರಣಜನಜಾಲ ಸಂ ಜೀವ ದೇವರದೇವ । ಸುರವಿನುತ ಪದ ಪಂಕಜಾತ ನಿರ್ಭೀತ ॥ ೨ ॥ ಕಾರುಣ್ಯನಿಧಿ ಪುಣ್ಯ ಚರಿತ ಗುಣಗಣಭರಿತ । ಹೇರಂಬ ಮೆರವೇಕ ರದನ ಗಜವದನ ॥ ಜಯ ಜಯತು ಜಯತು ॥ ೩ ॥ ॥ ೭ ॥

ಭಾಮಿನಿ.

ತಾಯೆ ಮಂಗಲಕಾಯೆ ಸತ್ವಮ । ದಾಯೆ ರಕ್ಷೋಪಾಯೆ ನಿರ್ಗತ । ಮಾಯೆ ನಿಖಿಲಾಮ್ನಾಯೆ ಭಾರತಿತೋಯರುಹವದನೆ ॥ ಆಯತಾಕ್ಷಿ ಸುಧೀಯೆ ಕಮಲಾ । ನಾಯಕಾತ್ಮಜಜಾಯೆ ವಿದ್ಯಾ । ಶ್ರೀಯು ನೆನೆನಗೊಲಿದೀಯೆ ನೆಲಸಿ ಮದೀಯಜಿಹ್ವೆಯಲಿ ॥ ೧ ॥ ॥ ೮ ॥

ರಾಗ ಸೌರಾಷ್ಟ್ರ, ತ್ರಿಪುಟತಾಳ.

ಜಯತು ಜಯತು ನಗೇಂದ್ರನಂದನೆ । ಜಯತು ದುರ್ಜನ ಬಂಧನೇ ॥ ಜಯತು ಜಯತು ಮಹಾಘಭಂಜನೆ । ಜಯತು ನಿತ್ಯ ನಿರಂಜನೇ ॥ ಜಯತು ಜಯತು ॥ ಪಲ್ಲ ॥ ಸರ್ವ ಸೌಭಾಗ್ಯ

ಪ್ರದಾಯಕಿ । ಸರ್ವ ಲೋಕವಿನಾಯಕಿ ॥ ಸರ್ವ ಸದ್ಗುಣ ಗಣ ಸಮನ್ವಿತೆ । ಸರ್ವ ಸಜ್ಜನ ಸನ್ನುತೇ ॥ ೧ ॥ ಭಕ್ತಜನ ಸಂಕಟ ವಿನಾಶಿನಿ । ಭಕ್ತಹೃದಯ ನಿವಾಸಿನಿ ॥ ಶಕ್ತಿಯುತೆ ಸಂಗರ ಭಯಂಕರಿ । ಶಕ್ತಿದೇವತೆ ಶಂಕರಿ ॥ ೨ ॥ ಕೋಮಲಾಂಗ ಲತಾವಿರಾಜಿತೆ । ತಾಮರಸಭವಪೂಜಿತೆ ॥ ಹೈಮವತಿ ವನಜಾಯತಾಂಬಕಿ । ಸೋಮಮುಖಿ ಜಗದಂಬಿಕೆ ॥ ಜಯತು ॥ ೩ ॥ ॥ ೧೧ ॥

ರಾಗ ಸೌರಾಷ್ಟ್ರ, ಅಷ್ಟತಾಳ.

ಕ್ಷೀರಾಂಬುನಿಧಿಜಾತೆ ಕೀರಸನ್ನಿಭವಾಣಿ । ಲೋಕಮಾತೆ ॥ ಪೂರ್ಣ । ಕಾರುಣ್ಯಸಂಭೃತೆ ಕಾಳಪನ್ನಗವೇಣಿ । ಲೋಕಮಾತೆ ॥ ॥ ೧ ॥ ಕಾಮರೂಪಿಣಿ ದೇವಿ ಕಲಿಮಲನಾಶಿನಿ । ಲೋಕಮಾತೆ ॥ ಮತ್ತ । ಸಾಮಜಗಾಮಿನಿ ಸರಸಿಜವಾಸಿನಿ । ಲೋಕಮಾತೆ ॥ ೨ ॥ ಅಕ್ಕ ಯಾತ್ರಿಕೆ ಪಾಲಿಸನುದಿನವೆನ್ನನು । ಲೋಕಮಾತೆ ॥ ವಿಷ್ಣು । ವಕ್ಷದೊಳಿಹ ತಾಯೆ ವಂದಿಪೆ ನಿನ್ನನು । ಲೋಕಮಾತೆ ॥ ೩ ॥ ॥ ೧೪ ॥

ವಾರ್ಧಿಕ.

ನರತನುವನಾಂತಾದ್ವಿತೀಯ ಬಾಣನ ಪ್ರಥಮ । ದಿರಿತಕಳು ಕುವ ಚತುರ್ಥಿಯರಿಗೆ ತೃತೀಯ ದು । ಸ್ತರುಷ ಸೌಖ್ಯವನಿತ್ತು ಮೋಹಪಂಚಮಿಯರಂ ತ್ಯಜಿಸಿ ಷಷ್ಠದಪಿತೃಗಳ ॥ ತೊರೆದು ನಿಜ ಪುರಿಗೈದಿದನ ಮಗನನಿಂದ್ರಾದಿ । ಸುರರಂ ಸುರರ್ಷಿ ವೇದವ್ಯಾಸ ಮುಖ್ಯಮುನಿ । ವರರನರ್ಕಾದಿ ಸರ್ವ ಗ್ರಹರನಭಿನಮಿಸಿ ಸುಜ್ಞಾನ ಮಂ ಪಡೆವೆನು ॥ ೧ ॥ ॥ ೧೫ ॥

ಭಾಮಿನಿ.

ವರ ಮಹಾಭಾರತ ಪುರಾಣದೊ । ಳರಿಮಥನ ಪಾಂಡವರು ಸಲೆ ಬಿಲು । ಸರಳವಿದ್ಯೆಯನರಿದು ಗುರುವಿಗೆ ದ್ರುಪದಭೂಪತಿಯ ॥

ಭರದ ದಕ್ಷಿಣೆಯಾಗಿ ಕೊಟ್ಟ । ಪರಿಯ ಬಹುಲಪುರೀಶ
ನೊಲುಮೆಯೊ । ಳೊರವೆನೊಪ್ಪುವ ಯಕ್ಷಗಾನ ಗ್ರಂಥರೂಪ
ದಲಿ ॥ ೧ ॥ ॥ ೧೬ ॥

ಕಂದಪದ್ಯ.

ವಿತತಾಷ್ಟಾದಶದೋಷ । ಪ್ರತತಿಯೊಳೇನಾದೊಡಂ ವಿಷಮ
ಮಿದರೊಳ್ಸಂ । ಗತಮಾಗಿರ್ದಡದಂ ಬುಧ । ರತಿ ಕೃಪೆಯಿಂ ತಿದ್ದಿ
ಮೆರೆಯಿಸುವದೀಕೃತಿಯಂ ॥ ೧ ॥ ॥ ೧೭ ॥

ರಾಗ ಸೌರಾಷ್ಟ್ರ, ತ್ರಿಪುಟತಾಳ.

ಅನಘ ಜನಮೇಜಯನು ಕರುಣಾ । ವನಧಿ ವೈಶಂಪಾಯ
ನನಪದ । ವನಜಗಳಿಗಭಿನಮಿಸಿ ನುಡಿದನು । ವಿನಯದಿಂದ ॥ ೧ ॥
ತಾಪಸನೆ ಮೊದಲೆಂತು ಪಾಂಡವ । ಭೂಪರಾನಿಜಕುಲಸಮಾಹಿತ ।
ಚಾಪವೇದವ ಪಠಿಸಿದರು ಪೇ । ಳಾಪರಿಯನು ॥ ೨ ॥ ರಣದೊಳಾ
ಕಲಿಪಾರ್ಥ ದ್ರುಪದನ । ಕೆಣಕಿ ಕೈಸೆರೆವಿಡಿದು ಗುರು ದ । ಕ್ಷಿಣೆ
ಯನಿತ್ತುದದೆಂತು ಪೇಳ್ಗುಣ । ಮಣಿಯೆ ದಯದಿ ॥ ೩ ॥ ಎಂದು
ಚರಣಕೆ ಮಣಿದ ರಾಯನ । ನಂದು ತಕ್ಕೈಸುತ್ತ ಮುಸಿ ಗೋ ।
ವಿಂದನಡಿದಾವರೆಯ ನೆನೆದಿಂ । ತೆಂದ ನೃಪಗೆ ॥ ೪ ॥ ॥ ೨೧ ॥

ವಾರ್ಧಿಕ.

ಕ್ಷಿತಿಪ ಕೇಳ್ಪುಣ್ಯಚರಿತವನಿಂದು ಕುಲದವನಿ । ಪತಿ ಪಾಂಡು
ಪುರಿಯನುಂ ಧರೆಯನುಂ ಗಾಂಗೇಯ । ಧೃತರಾಷ್ಟ್ರಗಿಗೆ ಬಿಟ್ಟು
ಕುಂತಿಮಾದ್ರಿಯರೆಂಬ ಸತಿಯರಂ ಕೂಡಿಕೊಂಡು ॥ ಶತಶೃಂಗ
ಶೈಲಕೈತಂದಲ್ಲಿ ನೆಲಸಿರ್ದು । ಸುತರೈವರಂ ಪಡೆದು ಕಿಂದಮುನ
ಶಾಪದಿಂ । ಮೃತನಾಗಲಾಮಾದ್ರಿ ಸಹಗಮನ ವಿಧಿಯಿಂದ ಪತಿ
ಲೋಕಮಂ ಪಡೆದಳು ॥ ೧ ॥ ॥ ೨೨ ॥

ರಾಗ ಭೈರವಿ, ಝುಂಪೆತಾಳ.

ಅರಸ ಕೇಳ್ಕೈ ಬಳಿಕ । ತರಳರೈವರು ಸಹಿತ । ನೆರೆಕುಂತಿ ನಡೆದಳ । ಲ್ಲಿರದೆ ಕರಿಪುರಕೆ ॥ ೧ ॥ ಧೃತರಾಷ್ಟ್ರಗಲ್ಲಿ ದುರು । ಮತಿ ಕೌರವಾದಿ ಶತ । ಸುತರು ಸಂಭವಿಸಿ ಬೆಳ । ವುತಲಿರ್ದರಂದು ॥ ೨ ॥ ಆಕೌರವರ ಜೊತೆಯೊ । ಳೀಕುಮಾರರಸಿರಿಸಿ । ಸಾಕಿದನು ಬಿಡದೆ ಭುವ । ನೈಕಬಲ ಭೀಷ್ಮ ॥ ೩ ॥ ಸರಳವಿದ್ಯೆಯ ಕೆಲವ । ವರ ಕೃಪಾಚಾರ್ಯರಿಂ । ದರುಹಿಸಿದನಾಭೀಷ್ಮ ತರಳರೆಲ್ಲರಿಗೆ ॥ ೪ ॥ ಮತ್ತೆ ಸಾಲದೆ ಧರೆಯೊ । ಳುತ್ತಮದ ಗುರುಗಳನು । ಪೌತ್ರರಭಿವೃದ್ಧಿಗರ । ಸುತ್ತಿರ್ದನವನು ॥ ೫ ॥ ಕಂತುಪಿತನೊಲುಮೆಯಲಿ ಕುಂತಿ ಸಹಿತಿರ್ದರತಿ । ಸಂತೋಷದಲಿ ಸುಗುಣ । ವಂತ ಪಾಂಡವರು ॥ ೬ ॥ ॥ ೨೮ ॥

ವಾರ್ಧಿಕ.

ಅರಸ ಕೇಳತ್ತಲಾದ್ರೋಣನತಿದೈನ್ಯದಿಂ । ದಿರಲಾರದರ್ಥಾಶೆಯಿಂದಾಸತೀಸುತ । ರ್ವೆರಸಿ ದ್ರುಪದಂ ಮಿತ್ರನೆಂದವನ ಮನೆಗೈದಲಾತನತಿಗರ್ವದಿಂದ ॥ ಜರೆಯುಲೆಲೆ ಮೂಢಾತ್ಮ ಕೇಳೆನ್ನ ಶಿಷ್ಯರಿಂ । ಸೆರೆವಿಡಿಸಿ ನಿನ್ನನೀಧರೆಯನಪಹರಿಸುವೆಂ । ವರೆಯುಬೇಡೆಂದು ಭಾಷೆಯನಾಡಿಯಲ್ಲಿಂದ ಬಂದನವನೇಂವೇಳ್ವೆನು ॥ ೧ ॥ ॥ ೨೯ ॥

ರಾಗ ಮಾಧವಿ, ತ್ರಿಪುಟತಾಳ.

(ಧಾಟಿ—ಪೃಥ್ವಿಪಾಲಕ ಕೇಳು ಮುರಹರ ॥ ಎಂಬಂತೆ.)

ಬಂದು ಪುಣ್ಯಾರಣ್ಯವೆಂದೆಸೆ । ವೊಂದು ವನದೊಳಿಗಿರ್ದು ಯೋಚನೆ । ಯಿಂದ ತನ್ನ ಸತೀಸುತರಿಗವ । ನೊಂದು ದಿನವಿಂತೆಂದನು ॥ ೧ ॥ ಹಳುವದಲಿ ಬಡತನದಿ ಕಾಲವ । ಕಳೆಯಲಾರೆನು ನಿಮ್ಮ ಪೋಷಿಪ । ಕೆಲಸವೇ ಘನ ಕಷ್ಟವಾದುದು । ತಿಳಿಯಲೆನಗೀ

ಸಮಯದಿ ‖ ೨ ‖ ಮಿತ್ರನಲ್ಲಿಗೆ ಪೋಗಿ ಭಾಷೆಯ | ಹೊತ್ತು ಕೊಂಡೆನು ಖತಿಯೊಳದಕಿ | ನ್ನೆತ್ತಣದು ಗತಿ ಘನ ದರಿದ್ರದ | ವೃತ್ತಿಗಿನ್ನೇಂಗೈವೆನು ‖ ೩ ‖ ಕೆರಳಿ ದ್ರುಪದಗೆ ನುಡಿದ ಭಾಷೆಯು | ಪರರಿಗುಸುರುವದುಚಿತವಲ್ಲವು | ಮರೆಯದಿರಿಯೆನು ತೊಡನೆ ಚಿಂತಿಸು | ತರಿದು ಮಗುಳಿಂತೆಂದನು ‖ ೪ ‖ ಧನವ ಗಳಿಸಿದ ಹೊರತು ಜೀವಿಸು | ವನುವನರಿಯೆನು ಪರಶುಧರನನು | ವಿನಯದಲಿ ಪ್ರಾರ್ಥಿಸಿದೊಡಹುದೆಮ | ಗೆನುತ ತೋರ್ಪುದು ಚಿತ್ತಕೆ ‖ ೫ ‖ ಆತನಲ್ಲಿಗೆ ಪೋಗಿ ನೋಡುವ | ರೀತಿಯಲಿ ನಾವೆನುತಲವರನು | ಪ್ರೀತಿಯಿಂದೊಡಗೊಂಡು ಗಮಿಸಿದ | ನಾತಪಸ್ವಿಯರಣ್ಯಕೆ ‖ ೬ ‖ ‖ ೩೫ ‖

ವಾರ್ಧಿಕ.

ಸುರಭಿ ಸುರತರು ಶೋಭಿಯಾಗಿರ್ದ ಮರ್ತ್ಯಪುರ | ವರಮಲ್ಲ ಶಶಕಮೃಗಕುಲಧಾರಿಯಾಗಿರ್ದು | ಶರದಿಂದುವಲ್ಲ ಚಂದ್ರಾರ್ಕತಾರಕ ಯುಕ್ತಮಾಗಿರ್ದ ಮಭ್ರಮಲ್ಲ ‖ ಸುರಭಿ ಶರಸಂಘಾತಿಯಾಗಿರ್ದ ಕಾಮಿನಿಯು | ರಿರುಬೆಯಲ್ಲರಿಯಲ್ಕೆ ಚಕ್ರಯುತಮಾಗಿರ್ದು | ಹರಿಹಸ್ತಮಲ್ಲಿಂತು ವರ್ಣಿಸಲ್ಕನುವಾಗಿ ತತ್ತಪೋವನಮೆಸೆದುದು ‖ ೧ ‖ ‖ ೩೬ ‖

ಭಾಮಿನಿ.

ಎಲೆ ನೃಪಾಲ ಮಹೇಂದ್ರಪರ್ವತ | ದೊಳಗೆ ತದ್ವನಮೆಸೆವುದಲ್ಲಿಗೆ | ಕಲಶಸಂಭವನೈದಿತನ್ಮುನಿಯಂಘ್ರಿಗಭಿನಮಿಸೆ ‖ ಹಲವು ಪರಿಯಿಂದಾತಸೀತನ | ನೊಲಿದು ಮನ್ನಿಸಿ ಬಂದ ಕಾರ್ಯವ | ತಿಳುಹಬೇಕೆನೆ ದ್ರೋಣ ನುಡಿದನು ಭಕ್ತಿಭಾರದಲಿ ‖ ೧ ‖ ‖ ೩೭ ‖

ರಾಗ ತೋಡಿ, ತ್ರಿಪುಟತಾಳ.

(ಧಾಟಿ--ಕೇಳು ನೃಪ ಕೆಲವಿಹುದು ನಿನ್ನಲಿ ॥ ಎಂಬಂತೆ.)

ಮುನಿವರನೆ ಕೇಳಳಿದನೆನ್ನಯ | ಜನಕನದರಿಂದೆನಗೆ ದೀನತೆ | ಜನಿಸಿತೀಸಂಸಾರ ಪೋಷಣಕೇ ॥ ಅನುವನರಿಯದೆ ಬಂದೆನಿಲ್ಲಿಗೆ | ಧನವನಿತ್ತುದ್ಧರಿಸಬೇಕೆನ | ಗೆನುತ ನಮಿಸಲುಸುರ್ದನವನದಕೆ ॥ ೧ ॥ ಅವನಿಯುಮರರಿಗಿತ್ತು ಧನವೆ | ಲ್ಲವನು ನಿರ್ಧನನಾದೆನಕಟಾ | ವಿವರಿಸುವದೇನೆನ್ನ ವಸತಿಯಲಿ ॥ ಹವದ ಸಂಗ್ರಹವಾದ ವರ ವೈ | ಷ್ಣವ ಮಹಾ ಧನು ಬ್ರಹ್ಮಶರವಿದೆ | ವಿವುಗಳನು ಕೊಂಬುದು ಸರಾಗದಲಿ ॥ ೨ ॥ ಕರಿಪುರಕೆ ನಡೆಯಲ್ಲಿ ನೂರಾ । ರ್ವರು ನೃಪಾತ್ಮಜರಿರ್ವರರವರಿಗೆ | ಗುರುವೆನಿಸಿ ಸೌಖ್ಯವನು ಪಡೆಯೆಂದು ॥ ಪರಶುಧರನಾಚಾಪಶರಗಳ | ನೆರಡನಿತ್ತುಪಯೋಗ ಮಂತ್ರವ | ನರುಹಿ ದ್ರೋಣನ ಕಳುಹಿಸಿದನಂದು ॥ ೩ ॥ ॥ ೪೦ ॥

ಕಂದಪದ್ಯ.

ಶರಚಾಪಗಳಂ ಕೊಂಡಾ | ತರುಣೀಸುತ ಸಹಿತ ಬೀಳುಕೊಂಡಲ್ಲಿಂದಂ | ಹರುಷದೊಳಾಕಲಿದ್ರೋಣಂ | ಭರದಿಂದೈತಂದ ನಾಗಲಾಗಜಪುರಿಗಂ ॥ ೧ ॥ ॥ ೪೧ ॥

ರಾಗ ಭೈರವಿ, ಝಂಪೆತಾಳ.

ಬಂದ ದ್ರೋಣನ ಬರವ | ನಂದು ಚಾರಕರ ಮುಖ | ದಿಂದರಿತು ಭೀಷ್ಮ ಕರ | ತಂದನಾತನನು ॥ ೧ ॥ ಸರುವೋಪಚಾರದಲಿ | ಸುರನದಿಯ ಸುತನವನ | ಚರಣಗಳನರ್ಚಿಸುತಲೆರಗುತಿಂತೆಂದ ॥ ೨ ॥ ಆವ ಕಾರಣದಿಂದ | ನೀವು ಬಂದವರಿದರ | ಭಾವವನು ಪೇಳ್ರೆನ | ಲಾನೀರ ನುಡಿದ ॥ ೩ ॥ ॥ ೪೪ ॥

ರಾಗ ಘಂಟಾರವ, ಏಕತಾಳ.

(ಧಾಟಿ— **ಚಿತ್ತವಿಸು ಭೂಪೋತ್ತಮನೆ ನುಡಿಯ** ॥ ಎಂಬಂತೆ.)

ಪರದಯಾನಿಧಿ ಕೇಳು ಪೂರ್ವದಲಿ । ನಾನೆನ್ನ ಪಿತನಲಿ । ಸರಳವೇದವನರಿವ ಸಮಯದಲಿ ॥ ಅರಸ ದ್ರುಪದನು ಕಲಿತನೆನ್ನೊಡ । ನಿರುತಲಾವಿದ್ಯೆಗಳನದರಿಂ । ಧರೆಯೊಳರ್ಥವನೀವೆನೆನಗೆಂ । ದುರುವ ಮೈತ್ರಿಯ ಬೆಳೆಸಿ ನಡೆದನು ॥ ೧ ॥ ಬಳಿಕ ಮತ್ಪಿತನಳಿದನದರಿಂದ । ದಾರಿದ್ರ್ಯವೆನ್ನನು । ಬಳಲಿಸಲು ಬೆಂಡಾಗುತಲ್ಲಿಂದ । ಲಲನೆಯಣುಗರು ಸಹಿತ ದ್ರುಪದನ । ಬಳಿಗೆ ರಾಜ್ಯಾಶೆಯಲಿ ಪೋದೆನು । ಹಳಿದನಾನೃಪನೆನ್ನನಲ್ಲಿಯೆ । ಕಳೆದು ಬಂದೆನು ಮಿತ್ರಭಾವವ ॥ ೨ ॥ ಘನತರದ ದೌರ್ಭಾಗ್ಯದಲಿ ನಾನು । ಬಳಲುತ್ತಲೀಯಂ । ಗನೆಯನಣುಗನ ಸಲಹುವಂದವನು ॥ ಮನೆದೊಳರಿಯದೆ ಜಗದೊಳಾರಿಹ । ರೆನಗೆ ಗುರುತನವಿತ್ತು ಬಡತನ । ವನು ನಿವಾರಣೆಗೈವ ದಾತೃಗ । ಳೆನುತ ಹುಡುಕುತ ಬಂದೆನಿಲ್ಲಿಗೆ ॥ ೩ ॥ ॥ ೪೭ ॥

ಭಾಮಿನಿ.

ಅದಕೆ ನುಡಿದನು ಭೀಷ್ಮನೀ ನಗ । ರದಲಿ ನೆಲಸಿರಿ ಸಕಲ ವಸ್ತುವ । ಸದನಸಹಿತಿತ್ತಪೆನು ನಿಮ್ಮ ಕುಟುಂಬ ಪೋಷಣಕೆ ॥ ಮುದದೊಳೆನ್ನಯ ಪೌತ್ರರಿಗೆ ಪೇ । ಳ್ವುದು ಧನುಃಶರವಿದ್ಯೆಗಳನೆನ । ಲದಕೆ ಸಮ್ಮತಿಯಿತ್ತನಾನಂದದಲಿ ಕಲಿದ್ರೋಣ ॥ ೧ ॥ ॥ ೪೮ ॥

ಕಂದಪದ್ಯ.

ಇತ್ತಂ ಬಹುಧನವನಮಿತ । ವಸ್ತುವನಿಳೆಗೋಗಜಾದಿಗಳನವಗಾತಂ ॥ ಪತ್ನೀಸುತಸಹಿತಾ ವಿ । ಪ್ರೋತ್ತಮನತಿಶಯ ಧನಾಢ್ಯನೆನಿಸಿದನಾಗಳ್ ॥ ೧ ॥ ॥ ೪೯

ರಾಗ ಕಾಪಿ, ಏಕತಾಳ.

(ಧಾಟಿ—ಏನನುಸುರುವೆ। ಮಾನಿನಿಯ ಚಲು॥ ಎಂಬಂತೆ.)

ಧಾರುಣೀಶ್ವರ ಕೇಳು ಭೀಷ್ಮನು। ಚಾರು ಲಗ್ನದಲಿ। ಸಕಲ ಕು। ಮಾರರನು ಕುಂಭಜನಿಗೊಪ್ಪಿಸೆ। ಭೂರಿ ವಿಭವದಲಿ। ಗರುಡಿಯು। ಮೂರುವರೆಯೋಜನದ ಬಹು ವಿ। ಸ್ತಾರದಳತೆಯಲಿ॥ ಕಟ್ಟಿಸಿ। ಭೈರವಿಯು ವಿಗ್ರಹವ ವಿರಚಿಸು। ತೋರಣದೊಳಲ್ಲಿ। ಸರ್ವರು। ಸೇರಿ ಸಾವಿರ ಕುರಿಯ ಹೊಯ್ಯುತ। ಧೀರೆ ಕಾಳಿಯ ಪೂಜೆಯನು ಹದಿ। ನಾರು ತರದುಪಚಾರದಲಿ ಗೈ। ದಾರತಿಯನೆತ್ತಿದರು ಪಾಡುತ॥ ೧॥ ॥ ೩೦॥

ರಾಗ ದರಬಾರ, ತ್ರಿಪುಟತಾಳ.

(ಧಾಟಿ—ಸುಳಿಗುರುಳಿನನಿಟ್ಟೆಸಳ್ಗಂಗಳ॥ ಎಂಬಂತೆ.)

ಚಂಡಿಯೆ ಚಾಮುಂಡಿಯೆ ಭೀಕರ। ಚಂಡಾಸುರ ವಿಗ್ರಹ ಖಂಡನೆ। ಚಂಡಾಂಶುನಿಕಾಶೆ। ಖಿಲನಾಶೆ॥ ಖಿಲನಾಶೆಯನುಗ್ರಹಿಸೆನ್ನುತ। ಚಂಡಿಕೆಗಾರತಿಯ ಬೆಳಗಿದರು॥ ಶೋಭಾನೆ॥ ೧॥ ಶಂಕರಿ ಶರ್ವಾಣಿ ಮಹಾಘ ಭ। ಯಂಕರಿ ಘನ ಖಡ್ಗದಾಬ್ಜ ವ। ಹಾಂಕುಶ ಶೋಭಿತೆಯೆ। ಗುಣವತಿಯೆ॥ ಗುಣವತಿ ನೀನೊಲಿಯೆಮಗೆನ್ನುತ। ಶಂಕರಿಗಾರತಿಯ। ಬೆಳಗಿದರು॥ ೨॥ ಕಾಳಿಯೆ ಕಲ್ಪಾಂತ ಜಗತ್ರಯ। ಕೋಲಾಹಲೆಯೆಮ್ಮಭಿಲಾಷೆಯ। ಪಾಲಿಸು ನೀನೆಂದು। ಮನದಂದು॥ ಮನದಂದೆಲ್ಲರು ಸಂಪ್ರಾರ್ಥಿಸೆ। ಕಾಳಿಯು ಬಾಯ್ದೆರೆದು। ನುಡಿದಳು॥ ಶೋಭಾನೆ॥ ೩॥ ॥ ೩೩॥

ರಾಗ ಮುಖಾರಿ, ಅಷ್ಟತಾಳ.

(ಧಾಟಿ—ಚದುರೆ ಚಂಪಕಸುನಾಸೆ॥ ಎಂಬಂತೆ.)

ಮೆಚ್ಚಿದೆ ಮೆಚ್ಚಿದೆ ನಿಮ್ಮ। ನಿಶ್ಚಲದ ಭಕ್ತಿಗಿನ್ನು। ನಚ್ಚಿನ ಭಕ್ತರು ನೀವು। ಹೆಚ್ಚು ಮಾತಿನಿಂದಲೇನು॥ ೧॥ ತಿಳಿದೆ ನಿಮ್ಮ

ಮನವನಿನ್ನು । ಸಲಿಸಿಕೊಡುವೆನಿಷ್ಟವನ್ನು । ಕೆಲವು ದಿವಸದೊಳಗೆ ನಾನು । ನಲವಿನಿಂದಲೆಲ್ಲವನ್ನು ॥ ೨ ॥ ಎಷ್ಟು ಧೀರರಾದರೇನು । ಬಿಟ್ಟರೆ ಸದ್ಧರ್ಮವನ್ನು । ಕೆಟ್ಟುಪೋಪರಿದರೊಳೆಂದು । ಧಿಟ್ಟ ಕಾಳಿ ನುಡಿದಳಂದು ॥ ೩ ॥ ॥ ೫೬ ॥

ರಾಗ ಮಧ್ಯಮಾವತಿ, ತ್ರಿಪುಟತಾಳ.

ಬಳಿಕ ಸುಮುಹೂರ್ತದಲಿ ದ್ವಿಜಕುಲ । ತಿಲಕ ದ್ರೋಣನು ಚಾಪವೇದವ । ನೊಲಿದು ಸಕಲ ಕುಮಾರವರ್ಗಕೆ । ಕಲಿಸಲಾರಂಭಿಸಿದನು ॥ ೧ ॥ ಈವಿಶೇಷ ಸಮಸ್ತ ದೇಶವ । ನಾವರಿಸೆ ವಿದ್ಯಾರ್ಥಿಗಳು ಬಲು । ಠೀವಿಯಲಿ ಬಂದಿಭಪುರಿಗೆ ಸಂ । ಭಾವಿಸಿದರಾಚಾರ್ಯನ ॥ ೨ ॥ ॥ ೫೮ ॥

ವಾರ್ಧಿಕ.

ಅರಸ ಕೇಳ್ ಬಾಲ್ಯದೊಳ್ ಕುಂತಿ ಮುನಿಮಂತ್ರಮಂ । ಪರಿಕಿಸಲ್ ಭಜಿಸಿ ರವಿಯಿಂ ಕರ್ಣನಂ ಪಡೆದು । ಭರದ ನಾಚಿಕೆಯಿಂದ ನದಿಗಿತ್ತು ನಡೆಯಲಧಿರಥನೆಂಬ ಸೂತನಲ್ಲಿ ॥ ಬರುತ ಕಂಡಾತನಂ ಕೊಂಡೊಯ್ದು ರಾಧೆಯಿಂ । ಬರಿಸಿ ಸಹಿತಾನದೀತೀರದ ನಿಜಾಲಯದೊ । ಳಿರುತ ಪಾಲಿಸಲವಂ ಯವ್ವನದೊಳಸ್ತ್ರವಿದ್ಯಾಪೇಕ್ಷೆಯಿಂ ಪೊರಟನು ॥ ೧ ॥ ॥ ೫೯ ॥

ಸಾಂಗತ್ಯ.

ಬಳಿಕ ಭಾರ್ಗವನಲ್ಲಿ । ಬಿಲುವಿದ್ಯೆಗಲಿತು ನಿ । ಷ್ಫಲವಾಗಲದನಿಭಪುರದಿ ॥ ಕಲಿಸುವ ವಾರ್ತೆಯ । ತಿಳಿದಲ್ಲಿಗೈತಂದ । ನೊಲವಿಂದ ಕರ್ಣನು ಭರದಿ ॥ ೧ ॥ ಬಂದು ಕುಂಭಜನಿಗೆ । ವಂದಿಸಿ ತರಳರ । ಬೃಂದವ ಪೊಗಲಿದಿರಿರ್ದ ॥ ಅಂಥ ನೃಪಾತ್ಮಜ । ನಂದು ಕುಳ್ಳಿರಿಸುತ್ತ । ಚಂದದಿಂದವನ ಮನ್ನಿಸಿದ ॥ ೨ ॥ ದಿನದಿನದಲಿ

ಕರ್ಣ । ನನುವನೀಕ್ಷಿಸಿ ಭೀಮಾ । ರ್ಜುನರ ಗರ್ವವನೀತನಿಂದ ॥ ಹನನಗೈಸುವೆನೆಂಬ । ಮನದೊಳಾತನ ಮಿತ್ರ । ತನವ ಕೌರವನು ಸಾಧಿಸಿದ ॥ ೩ ॥ ನಗೆನುಡಿಯಾಟಪಾಠಗಳಲ್ಲಿ ಭೋಜನಾ । ದಿಗಳ ಲ್ಲೊಬ್ಬರನೊಬ್ಬರವರು ॥ ಅಗಲದೆ ಸರ್ವ ಕಾ । ರ್ಯಗಳಲೊಂದಾ ದರು । ಸೊಗಸಿಂದ ಕರ್ಣ ಕೌರವರು ॥ ೪ ॥ ॥ ೬೩ ॥

ವಾರ್ಧಿಕ.

ಸಕಲ ಶ್ರುತಿಶಾಸ್ತ್ರಾದಿ ವೈದಿಕದ ಲೌಕಿಕದ । ಸಕಲ ಮಂ ತ್ರಾರ್ಥಗಳ ರಥ ಕರಿ ಮಹಾಶ್ವಾದಿ । ಸಕಲ ವಾಹನಗಳಾಜಿಯ ಮಹಾವ್ಯೂಹರಚನೆಯ ಶಬ್ದವೇಧಿತ್ವದ ॥ ಸಕಲ ಶಸ್ತ್ರಗಳ ಮಾಯ ಕಮಲ್ಲ ಯುದ್ಧಗಳ । ಸಕಲ ಭೇದಂಗಳಂ ಜಲಶಿಖಿಸ್ತಂಭಾದಿ । ಸಕಲ ನೃಪಸನ್ನಾಹಗಳನಾನೃಪಾತ್ರಜರ್ಗರುಹಿದಂ ಗುರು ಕ್ರಮ ದೊಳು ॥ ೧ ॥ ಅವರೊಳಿಂದ್ರಜನಖಿಲ ಗುಣಗಳೊಳ್ಕುಂಭ ಸಂ । ಭವನ ಮನಮಂ ಮೆಚ್ಚಿಸುತ್ತ ಬರೆ ದ್ರುಪದನಾ । ಹವಕಿವನೆ ಯೆಂ ದರಿತು ನಿತ್ಯದೊಳ್ತನ್ನಖಿಲ ಗೂಢ ಮಂತ್ರಾಸ್ತ್ರಗಳನ ॥ ಅವನಿಗರು ಹುತ ನೀನೆ ಜಗದೇಕವೀರನಾ । ಗುವೆಯೆಂದು ಗುರು ಬ್ರಹ್ಮ ಶೀರ್ಷವೆಂಬುತ್ತಮಾ । ಸ್ತ್ರವನಿತ್ತನರ್ಜುನಂ ಸಕಲನೃಪಸುತ ಶಿರೋಮಣಿಯಾಗಿ ರಂಜಿಸಿದನು ॥ ೨ ॥ ॥ ೬೪ ॥

ರಾಗ ಕೇತಾರಗೌಳ, ಅಷ್ಟತಾಳ.

ಒಂದು ದಿವಸದೊಳ । ಗಂದದಿ ಕುರುಪಾಂಡು । ನಂದನರೆಲ್ಲ ವರು ॥ ಒಂದಾಗಿ ಗುರುಪಾದ । ವೃಂದಕ್ಕೆ ಭಕ್ತಿಯೊ । ಳ್ವಂದಿಸು ತಿಂತೆಂದರು ॥ ೧ ॥ ಕಾಡೊಳು ಮೃಗಬೇಟೆ । ಯಾಡುವ ಮಾನಸ । ಮೂಡಿದುದೆಮಗೆ ನೀವು ॥ ನೀಡಿರಪ್ಪಣೆಯನ್ನು । ಬೇಡಿಕೊಂಬೆವು ನಿಮ್ಮ । ಗಾಢದಿ ಬಹೆವು ನಾವು ॥ ೨ ॥ ದುಷ್ಟಮೃಗಂಗಳ ।

ಘಟ್ಟನ್ನೆ ಕೊಲುವೆವು । ಶಿಷ್ಟಮೃಗಂಗಳನು ॥ ಬಿಟ್ಟು ನಾವೆಲ್ಲವ । ರೊಟ್ಟಾಗಿ ಬರುವೆವು । ಘಟ್ಟನೆ ಕಳುಹಿರಿನ್ನು ॥ ೩ ॥ ಕೇಸರಿ ಮುಂತಾದ । ರಾಶಿ ಮೃಗೌಘವ । ಡ್ಡೈಸುತ್ತಲೈತಂದರು ॥ ನಾಶ ಗೈದಪೆವದ । ನಾಶೀರ್ವಾದವ ಮಾಡಿ । ರೀಸಮಯದೊಳೆಂದರು ॥ ॥ ೪ ॥ ಹೀಗೆ ನಿಮ್ಮಿಷ್ಟವುಂ । ಟಾಗುವದಾದರೆ । ಪೋಗಿ ಬನ್ನಿರಿ ಪುರಿಗೆ ॥ ಆಗಲಿ ವಿಜಯ ಸ । ರಾಗದಿ ನಿಮಗೆಂದ । ನಾಗುರು ಶಿಷ್ಯ ರಿಗೆ ॥ ೫ ॥ ಗುರುವಿನಪ್ಪಣೆಯಾಂತು । ಶರಚಾಪ ಖಡ್ಗಾದಿ । ಸರುವ ಶಸ್ತ್ರವ ಧರಿಸಿ ॥ ಅರಸುಕುಮಾರರು । ಪೂರಮುಟ್ಟೆರಡವಿಗೆ । ಪುರದಿಂದ ಪಡೆವೆರಸಿ ॥ ೬ ॥ ॥ ೭೧ ॥

ರಾಗ ಮಾರವಿ, ಏಕತಾಳ.

(ಧಾಟಿ—ಏನೆಂಬೆನು ನೃಪಸೂನುಗಳುರುತರ ॥ ಎಂಬಂತೆ)

ಭೂರಮಣನ ಕೇ । ಳೋ ರಣದಲಿ ಕಾಂ । ತಾರವನೈದಿ ಕು । ಮಾರರು ಕರಿಕಂ । ಠೀರವಮುಖಮೃಗ । ವಾರದ ಜೀವವ । ಜಾರಿಸುತೈದಿದ । ರಾರುಭಟಿಸುತಾ ॥ ಏನನೆಂಬೆ ॥ ೧ ॥ ಝಡಿಝಡಿ ಬಡಿಬಡಿ । ಹಿಡಿಹಿಡಿ ಕಡಿಕಡಿ । ತಡೆತಡೆ ನಡೆನಡೆ । ಕೆಡೆಕೆಡೆ ಬಿಡೆ ಬಿಡೆ । ಫಡಫಡ ತೊಡುತೊಡು । ಹೊಡೆಹೊಡೆ ಬಿಡೆನುತ । ನಡೆ ದರು ಬೇರೊಂ । ದಡವಿಗೆ ಭರದಿ ॥ ಏನನೆಂಬೆ ॥ ೨ ॥ ॥ ೭೩ ॥

ವಾರ್ಧಿಕ.

ಜನಪ ಕೇಳದುನಿಷಾದಾರಣ್ಯಮೊಡೆಯನಾ । ವನಕೇಕಲ ವ್ಯಾಂಕಶಬರನವನಾದ್ರೋಣ । ಮುನಿಯನಸ್ತ್ರಾಭ್ಯಾಸಕಾಶ್ರಯಿಸ ಲಾತನದಕೊಪ್ಪದಿರಲಾವೀರನ ॥ ಅನುವಾದ ಮೂರ್ತಿಯಂ ಮಾಡಿ ಪೂಜಿಸುತ ನಿಜ । ಮನದಿಷ್ಟಮಂ ಪಡೆದು ನಿಜಮಂತ್ರಿ ಮುಂತಾದ ।

ವನಚರರನೊಡಗೊಂಡು ಮೃಗಬೇಟೆಯಾಡುತ್ತೈತಂದನಾದಿನದೊಳಲ್ಲಿ ॥ ೧ ॥ ॥ ೭೬ ॥

ರಾಗ ಮುಖಾರಿ, ಏಕತಾಳ.

(ಧಾಟಿ—ಮೃಗಬೇಟೆಯಾಡುತ್ತಲೈದಿದನು ॥ ಎಂಬಂತೆ.)

ಮುದದಿಂದ ಮೃಗಬೇಟೆಯಾಡಿದನು । ಕೈರಾತಭಟನು । ಮುದದಿಂದ ಮೃಗಬೇಟೆಯಾಡಿದನು ॥ ಪಲ್ಲ ॥ ಒದರಿದ ಕೆದರಿದ । ಹೆದರಿದ ಪುದುಗಿದ । ರೊದಗಿದ ಮದಮೃಗ । ದುದರವ ಬಗೆದು ॥ ಅನುಪಲ್ಲ ॥ ನಾನಾವರ್ಣದ ಶ್ವಾನಗಳನು ಮದ । ದಾನೆ ಕುದುರೆಗಳ । ನಾಸಿಸಿಬಿಡುತಾ ॥ ೧ ॥ ಅಲ್ಲಿದೆಯಿಲ್ಲಿದೆ । ಯಿಲ್ಲಿದೆ ಕೊಲ್ಲೆಂ । ದೆಲ್ಲರು ಗುಲ್ಲಿನ । ಸೊಲ್ಲಿಡಲಲ್ಲಿ ॥ ೨ ॥ ಝುಗಝುಗ ಝುಗಿಸುವ । ಹೊಗರುಗಣೆಗಳನು । ತೆಗೆತೆಗೆದುಗಿವುತ । ಮೃಗ ಗಳಿಗೆಸುತಾ ॥ ೩ ॥ ॥ ೭೭ ॥

ಕಂದಪದ್ಯ.

ಇತ್ತಲ್ಕುರುಪಾಂಡವರೆಸ । ಗುತ್ತಿಹ ಮೃಗಬೇಟೆಯುಂ । ಪರೀಕ್ಷಿಸುತವರೊಳ್ ॥ ಸತ್ವೋನ್ನತ ವಿಜಯಂ ಮುಂ । ದೊತ್ತಿ ಬರಲ್ಕಂಡು ಶಬರಪತಿಯುವಗೆಂದಂ ॥ ೧ ॥ ॥ ೭೮ ॥

ರಾಗ ಪಂತುವರಾಳಿ, ಝಂಪೆತಾಳ.

(ಧಾಟಿ—ಆರೆಲೋ ನೃಪಾಲಕುವರನೇ ॥ ಎಂಬಂತೆ)

ಪೂತುರೇ ಕುಮಾರ ವೀರನೇ । ಭಳಿರೆಮುಝರೆ । ಪೂತುರೇ ಕುಮಾರ ವೀರನೇ ॥ ಪಲ್ಲ ॥ ರೀತಿಯಿಂದ ಸಕಲ ಜಲ ಸ । ಮೇತನಾಗಿ ಬಂದು ಮಿಗವ । ಘಾತಿಸುತ್ತಲಿದ್ದ ಸನ್ನ । ಸಾತಿಶಯದ ರೂಪದಿಂದ ॥ ಜಾತವಾಯ್ತು ಹರುಷವೆನ್ನೊಳು । ನೀನದಾವ । ಭೂತಳೇಶನಣುಗನಿಳೆಯೊಳು । ಯೆಂಬುದೊಂದು । ಮಾತಿಗ

ಪೇಳು ಹಿತದೊಳು || ಭಳಿರೆ ಮಝುರೆ | ಪೂತುರೇ ಕುಮಾರ ವೀರನೇ || ೧ || ಹುಲು ಕಿರಾತ ನೀನು ಬಹಳ | ಸಲುಗೆಯಿಂದಲೀಗಲೆನ್ನ | ಕುಲವ ಕೇಳ್ವೆಯಿದರೊಳಾವ | ಫಲವದಾದರಾಗಲಿಂದು || ಕುಲಜ ಪಾಂಡುರಾಯನಣುಗನು | ನಾನು ಲೋಕ | ದೊಳಗೆ ಪಾರ್ಥನೆಂಬರೆನ್ನನು | ನೀನಪಾರು | ತಿಳುಹು ಬೇಗ ನಿನ್ನ ಪರಿಯನು || ಭಳಿರೆ ಮಝುರೆ | ಪೂತುರೇ ಕಿರಾತರೊಡೆಯನೇ || ೨ || ಕನಕಧನ್ವನೆಂಬ ಶಬರ | ಜನವರೇಣ್ಯನಣುಗ ನಾನು | ಘನಬಲಾಢ್ಯನೇಕಲವ್ಯ | ನೆನಿಪ ಪೆಸರೊಳೀನಿಷಾದ || ವನದ ಧೀಶನಾಗಿ ಮೆರೆವೆನು | ಸಕಲವಿದ್ಯೆಗೆನಗೆ ವೀರ ಕುಂಭಜಾತನು | ಗುರುವಿಶೇಷ | ವೆನುವದೇನು ಕೇಳು ಮಾತನು || ಭಳಿರೆ ಮಝುರೆ | ಪೂತುರೇ ಕುಮಾರ ವೀರನೇ || ೩ || || ೮೧ ||

ರಾಗ ಭೈರವಿ, ಅಷ್ಟತಾಳ.

ಮರುಳ ಕಿರಾತ ಕೇಳೋ | ದ್ರೋಣನು ನಿನ್ನ | ಗುರುವೆನ್ನ ಬೇಡೆನ್ನೊಳು || ಸರುವ ವಿದ್ಯೆಯನೆಮ | ಗರುಹುತೆಮ್ಮಲ್ಲಿಯೇ | ಯಿರುವನಾಗುರುವೆಂದನು || ೧ || ನಿಮ್ಮಲ್ಲಿರುವ ದ್ರೋಣನು | ಸಂತೋಷದೊ | ಳೆಮ್ಮಂಥ ಶಿಷ್ಯರನು || ನಲ್ಮೆಯೊಳುಪದೇಶ | ಧರ್ಮಾದಿ ಸಲಹಿದ | ರುಮ್ಮಳವೇನೆಂದನು || ೨ || ಆಗುರುವರಗೆ ನೀನು | ಒಪ್ಪುವ ಶಿಷ್ಯ | ನಾಗಿಪ್ಪುದಾದರಿನ್ನು || ಕೈಗುಣವನು ತೋರಿ | ಸೀಗ ಸಂಗರಕಿದಿ | ರಾಗಿ ನೀನೆನಗೆಂದನು || ೩ || ತರಳನಾಗಿರುವೆ ನೀನು | ಯನ್ನಾಜಿಗೆ ಸರಿಯಾಗಿ ನಿಂದರಿನ್ನು || ಹರಣದಾಶೆಯೊಳೋಡ | ದಿರುವೆಯ ಪೇಳೆನೆ | ಕೆರಳುತರ್ಜುನನೆಂದನು || ೪ || ಹಳುವದ ಮೃಗಗಳನು | ಕೊಲ್ಲುವ ಬೇಡ | ಗಳುಕುವ ಭಟನೆ ನಾನು || ತಲೆಗಡರಿದ ಗರ್ವ | ಬಲದೊಳಿಂತಾಡಿದೆ | ನಿಲಿಸುವೆನಿದನೆಂದನು || || ೫ || ತರಳ ನೀನೆಂದು ನಾನು ನೀತಿಯ ಮಾತ | ನೊರೆದರೆ

ನೀನದನು ॥ ಅರಿಯದೆ ಹೆಮ್ಮೆಯು । ಸೊರೆವೆಯು ನೋಡೆಂದು । ಬಿರು
ಸರಳುಗಳೆಚ್ಚನು ॥ ೬ ॥ ಹುಲು ಬಾಣದೆಸುಗೆಯಿಂದ । ಕಾದಿದ
ರೇನು । ಫಲವಿಲ್ಲ ದ್ರೋಣನಿಂದ ॥ ಗಳಿಸಿರ್ಪ ಮಂತ್ರಾಸ್ತ್ರ । ಗಳ
ನುಗಿನೋಡುವೆ । ನಳುಕಬೇಡೆನುತೆಚ್ಚನು ॥ ೭ ॥ ಅಂಥಾ ಸಮರ್ಥ
ನೀನು । ಆಗಿರ್ದರೆ । ನಿಂತುನೋಡಾಜಿಗಿನ್ನು ॥ ಅಂತರಗೊಡೆನೆಂದು ।
ತಾಂತವಕದೊಳಸ್ತ್ರ । ಮಂತೆಗೆದೆಸುತಿರ್ದನು ॥ ೮ ॥ ॥ ೮೯ ॥

ಭಾಮಿನಿ.

ತೆಗೆದನಾಶಬರೇಂದ್ರನಸ್ತ್ರಾ । ಳಿಗಳನಹಿತಿಖಿ ತಿಮಿರನೀರದ ।
ನಗಕುಲಾದಿ ಸಮಸ್ತ ಮಂತ್ರಾಸ್ತ್ರಗಳನೆಸಲಾಗಿ ॥ ವಿಗಡನರ್ಜುನ
ಗರುಡವಾರುಣ । ಗಗನಮಣಿಪವಮಾನ ವಜ್ರಾ । ದಿಗಳನೆಚ್ಚುಪ
ಶಮಿಸಲಾಕ್ರೈರಾತನಿಂತೆಂದ ॥ ೧ ॥ ॥ ೯೦ ॥

ರಾಗ ಭೈರವಿ, ಏಕತಾಳ.

(ಧಾಟಿ—ಭಳಿಭಳಿರೆಲವೊ ಶಭಾಸು ॥ ಎಂಬಂತೆ.)

ಭಳಿರೆ ನೃಪಾಲಕುಮಾರ । ನಿನ । ಗೊಲಿದಿಹನಾಗುರುವೀರ ॥
ತಿಳಿದೆನೆನುತ ಬೊಬ್ಬಿರಿದು । ಕೂ । ರಲಗುಗಳೆಚ್ಚನು ಮುಳಿದು ॥
॥ ೧ ॥ ವಿಧವಿಧ ಮಂತ್ರಾಸ್ತ್ರದಲಿ । ಮೆ । ಚ್ಚಿದೆ ನಿನಗಿರಲಿಂದಿನಲಿ ॥
ಗದೆಖಡುಗಾದಿಗಳಿಂದ । ನೀ । ನೊದಗಿದಡರಿದಪೆನೆಂದ ॥ ೨ ॥ ಆಗಲಿ
ನಿನ್ನಿಷ್ಟದಲಿ । ಅನು । ವಾಗುವೆನೆನುತೊದಗಿನಲಿ ॥ ಆಘನ ಖಡ್ಗ
ಗದಾದಿ । ರಣ । ಯೋಗವ ತೋರ್ದನು ಭರದಿ ॥ ೩ ॥ ಭಳಿರೆನುತೆ
ನಿಸಿ ಕೊಳುತ್ತಾ । ದೆಸೆ । ಮೊಳಗುವೊಲಾರ್ಭಟಿಸುತ್ತಾ ॥ ಹಲವಂಗದಿ
ಹಳಚಿದರು । ತ । ವ್ಮೊಳಗವರೀರ್ವರು ಭಟರು ॥ ೪ ॥ ಮೆಚ್ಚುವ
ನರ್ಜುನಗವನು । ಮನ । ಮೆಚ್ಚುವನವಗರ್ಜುನನು ॥ ನಿಶ್ಚಲ ಧೈ
ರ್ಯವನಾಂತು । ತ । ವ್ಮಿಚ್ಛೆಯೊಳೊದಗಿದರಿಂತು ॥ ೫ ॥ ॥ ೯೫ ॥

ವಾರ್ಧಿಕ.

ಅರಸ ಕೇಳ್ಕೋಪದಿಂ ಬಾಹುಪ್ರತಾಪದಿಂ। ತರುಬಿ ಹೊಯ್ದಾಡುತಿರಲವರದಂ ನೋಡುತಿರ । ದುರುಬಿ ಬಲಯುಗಳಮಂಜದೆ ಮುಳಿದು ಜಗಳವುಂ ತೊಡಗೆ ಶಂಕಿಸಿ ಯಮಜನು॥ ಪರಿಣಾಮದಂ ದಮಂ ಕಲಹಸಂಬಂಧಮಂ । ಮುರಿಯದಿರಲಾಗದಿಂದೆನುತೈದಿ ಬೇಗದಿಂ । ನರನನೊತ್ತಾಯದಿಂ ನಿಲಿಸಿ ನಿರ್ವಾಯದಿಂ ಶಬರೇಂದ್ರಗಿಂತೆಂದನು ॥ ೧ ॥ ॥ ೯೬ ॥

ಸಾಂಗತ್ಯ.

ಕೈರಾತರಾಜ ಕೇಳ್ । ಸೈರಿಸು ಕೋಪವ । ಭಾರಿಯ ಭಟನೀನೂ ನರನು ॥ ವೀರಾಧಿವೀರ ನಿ । ವ್ವಾರ್ವರ ಸಂಗ್ರಾಮ । ಶೀರದೆಂದಿಗು ಕಂಡೆನಿದನು ॥ ೧ ॥ ಧುರದ ಮಧ್ಯದಲಿ ಹಿಂ । ದಿರುಗುವದುಚಿತವ । ಲ್ಲ ರಿತಿರ್ಪೆನಾದರೇನಿಂದು ॥ ಮರಣ ಪರ್ಯಂತ ಸಂ । ಗರಗೈಯೆ ಸಂದರ್ಭ । ಸರಿಯಲ್ಲ ಮೆಮಗೆ ಕೇಳಿಂದು ॥ ೨ ॥ ಗುರುಶಿಷ್ಯತನಗಳ । ಪರಿಕಿಸಿದಪೆನೆಂಬ । ಗರುವವೇಕೆಮ್ಮ ಪಾರ್ಥನಿಗೆ ॥ ತರಳನುಕ್ತಿಯಲಿಂತು । ಮರಣಾಂತದವಧಿಯ । ಧುರವೇಕೆ ಶಬರ ಪೇಳ್ನಿನಗೆ ॥ ೩ ॥ ಹೊಂದಿದ ವೈರವೇ । ನೊಂದಿಲ್ಲದೀರೀತಿ । ಯಿಂದ ಕಾದಿದರಿನ್ನು ನಮಗೆ ॥ ಅಂದವೇ ಕೇಳ್ದರೇನೆಂದು ಪೇಳ್ವುದು ಲೋಕ । ವೆಂದು ನೀ ತಿಳಿಯೆಂದನವಗೇ ॥ ೪ ॥ ॥ ೧೦೦ ॥

ರಾಗ ಆನಂದಭೈರವಿ, ಏಕತಾಳ.

(ಧಾಟಿ--ಎನಲವನುಸುರಿದ । ವನಿತೆಯನಾಬಡ ॥ ಎಂಬಂತೆ.)

ಎನೆಕೇಳುತಲಾ । ವನಚರನೀತನು । ಘನ ಧಾರ್ಮಿಕನೆಂದು ॥ ಮನದೊಳಗರಿವುತ । ಮುನಿಸನು ಬಿಡುತ । ಜರ್ಜುನ ಘರ್ಮಜರಿಗೆ । ವಿನಯದಿ ನುಡಿದನು ॥ ೧ ॥ ಕ್ರೋಧದೊಳ್ವಾಗಿನಿ ।

ತಾದುದು ಭಾವಿಸೆ । ಸಾಧುಗಳೈ ನೀವು ॥ ಭೇದವನೆಣಿಸದಿ । ರೈದಿರಿ ಸಕಲರು । ಹಾದಿಯು ಹಿಡಿದತಿ । ಮೋದದೊಳೆಂದನು ॥ ೨ ॥ ಬಳಿಕಾತನು ನಿಜ । ನಿಲಯಕೆ ಶಬರರ । ಬಲಸಹಿತೈದಿದನು ॥ ಚಳಕದೊಳಾಶತಿ । ಕುಲದ ಕುಮಾರರು । ನಲಿವುತ ತಮ್ಮ ಯು । ಪೊಳಲನು ಸಾರ್ದರು ॥ ೩ ॥ ॥ ೧೦೩ ॥

ಕಂದಪದ್ಯ.

ಧರಣಿಪ ಕೇಳೈತಂದಾ । ಸುರಪತಿಸುಕುಮಾರ । ಪಾರ್ಥ ನತಿಭಕ್ತಿಯೊಳಂ ॥ ಕರಗಳನೆರಡಂಜೋಡಿಸಿ । ಗರುಡಿಯು ಗುರು ವೀರ ಕುಂಭಸುತಗಿಂತೆಂದಂ ॥ ೧ ॥ ॥ ೧೦೪ ॥

ರಾಗ ಕಾಂಬೋಧಿ, ಆದಿತಾಳ.

(ಧಾಟಿ—ಶ್ರೀಮನೋಹರ । ಸ್ವಾಮಿ ಪರಾಕು ॥ ಎಂಬಂತೆ.)

ಲಾಲಿಸೆನ್ನಯ ಮಾತ ವಿಖ್ಯಾತ ॥ ಶೀಲಸಮನ್ವಿತ ಗುರು ಕುಂಭಜಾತ ॥ ಪಲ್ಲ ॥ ಸರುವ ವಿದ್ಯೆಗಳನ್ನು ಕಲಿಸಿದಿರೆಮಗಿನ್ನು । ಸರಳ ಕೈವಾರದೊಳೆನಗೆಣೆಯಾದ ॥ ಪುರುಷರೆ ಯಿಲ್ಲೆಂದು । ಪೇಳ್ದಿ ಯಿಾಮೊದಲದು । ಬರಿಯ ಭಾಷಣವೆಂದು । ಚಿತ್ತದೊಳರಿವುದು ॥ ೧ ॥ ವನದೊಳಗೋರ್ವನು । ವಾಸಗೈದಿರುವನು । ಘನ ಬಲವಂತನು । ಶಬರಕುಲಜನು ॥ ಎನಗವನೆಸುಗೆಯು ಚಳಕದ ರೀತಿಯು । ಅನುಪ ಮನಹನೆಂದು । ತೋರಿತು ಮನಕಿಂದು ॥ ೨ ॥ ಕನಕಧನ್ವಜನಂತೆ । ಏಕಲವ್ಯಕನಂತೆ । ತನಗಸ್ತ್ರವಿದ್ಯದ ಮಂತ್ರ ನಿನ್ನಿಂದ ॥ ಮನನ ವಾಯ್ತೆಂದನಾ । ಶಬರನೆಂದಾತನ । ನನುಸರಿಸಿದೆಯ್ಯ । ದಯದಿ ಪೇಳಲೆ ಜೀಯ ॥ ೩ ॥ ॥ ೧೦೫ ॥

ರಾಗ ಕಾಂಬೋಧಿ, ಝಂಪೆತಾಳ.

(ಧಾಟಿ--ನರನೆ ನೀನೇಕೆ ಭ್ರಮೆಯಾದೆ ಸುರಗಿಯ ಬಿಸುಟು ॥ ಎಂಬಂತೆ.)

ಎನೆಕೇಳ್ದು ಗುರು ತನ್ನ । ಮನದೊಳುಸುರಿದ ದ್ರುಪದ । ಜನಪನನುವರಕೆ ನರನೆಂದು ॥ ಅನುವನರಿದಿಹೆನದಕೆ । ಜನಿಸು ವದು ವಿಘ್ನವೀ । ತನಿಗೆ ಸಮಬಲನಿರ್ದರಂದು ॥ ೧ ॥ ಒಂದುಪಾ ಯದೊಳವನ । ನಂದಗೆಡಿಸುವದೆ ಗುಣ । ವೆಂದು ವಿಜಯಗೆ ಪೇಳ್ದ ನೆನಗೆ ॥ ಇಂದು ನೀ ನುಡಿದ ನುಡಿ । ಸಂದೇಹವಾಯಿತೀ । ನೆಂದುಪೇಳುವೆನಯ್ಯ ನಿನಗೆ ॥ ೨ ॥ ಇನಿತಿದೆಲ್ಲವನವನ । ಮನೆ ಗೈದಿ ತಿಳಿಯಬೇ । ಕೆನುತಲಾಪಾಕಶಾಸನಿಯು ॥ ಅನುವರಿದು ಕರ ಕೊಂಡು । ಘನ ಜವದೊಳೈದಿದನು । ಕನಕಧನ್ವನ ಮಗನ ಮನೆಯ ॥ ೩ ॥ ॥ ೧೧೦ ॥

ರಾಗ ಶಂಕರಾಭರಣ, ಅಷ್ಟತಾಳ.

(ಧಾಟಿ--ವಲ್ಲಭೆ ಕೇಳಂಥ ಮಾತ ॥ ಎಂಬಂತೆ.)

ಬಂದ ದ್ರೋಣ ಪಾರ್ಥರಿಗಾ । ನಂದದಿಂದಾಸನವನಿತ್ತು । ವಂದಿಸಿ ಸರ್ವೋಪಚಾರ । ದಿಂದ ಗುರುವನು ॥ ನಿಂದು ಪೂಜೆ ಗೈದು ಭಕ್ತಿ । ಯಿಂದ ನಿಮ್ಮಾಗಮನವೇನು । ಚಂದದಿಂದ ಪೇಳಿ ರೆಂದ । ನಂದು ಶಬರನು ॥ ೧ ॥ ಬಿಲ್ಲ ವಿದ್ಯೆಯಲ್ಲಿ ನೀನು । ಬಲ್ಲಿದ ನೆಂದೆಂಬೀವಾರ್ತೆ । ಯಲ್ಲವನ್ನು ಕೇಳಿ ಬಂದೆ । ವಿಲ್ಲಿ ಲಾಲಿಸು ॥ ಎಲ್ಲಿ ಯಾವ ಶಸ್ತ್ರ ನಿಪುಣ । ನಲ್ಲಿಗೈದಿ ಚಾಪವೇದ । ವೆಲ್ಲಿ ಕಲಿತೆ ಪೇಳ್ಳುದೆಂದ । ನಲ್ಲಿ ದ್ರೋಣನು ॥ ೨ ॥ ಗುರುವೆ ನಿನ್ನ ಮೂರ್ತಿ ಯನ್ನು । ವಿರಚಿಸಿ ಪೂಜಿಸುತಲದರೊ । ಳರಿದೆನಸ್ತ್ರವೇದಗಳನು । ತರದೊಳೆಂದನೂ ॥ ಸರಿಯಿದಾಯ್ತು ನಿನಗೆ ನಾವು । ಗುರುಗಳಾದೆ ವೆಮಗೆ ನೀನು । ಹರುಷದಿಂದ ದಕ್ಷಿಣೆಯನುತೆರುವುದೆಂದನೂ ॥ ॥ ೩ ॥ ಏನ ಕೇಳ್ಪಿರದನು ನಿಮಗೆ । ಸಾನುರಾಗದಿಂದ ಕೊಡುವೆ ।

ನೂನವಿಲ್ಲಿದೆಂದು ನುಡಿದ । ಕಾನನೇಂದ್ರನು ॥ ನಾನು ಕೇಳ್ದ ವಸ್ತು ವನ್ನು । ನೀನು ಕೊಡದೆ ಪೋದೆಯಾದ । ರೇನಮಾಳ್ಪೆ ನೆನ್ನ ವಚನ ಹಾನಿಗೆಂದನೂ ॥ ೪ ॥ ॥ ೧೧೪ ॥

ರಾಗ ಮಾರವಿ, ಏಕತಾಳ.

ನುಡಿಯನು ಮೀರಿದ। ಕೆಡುಕನ ಹೊರುವುದೆ। ಪೊಡವಿಯು ಗುರುರಾಯಾ ॥ ಸುಡದೆ ಮಹಾಘವು । ನುಡಿ ನಿಸ್ನಿಷ್ಟವ । ತಡೆಯು ದೆನಗೆ ಜೀಯ ॥ ೧ ॥ ಸುರಗಿರಿ ಜರಿಯಲಿ । ಧರಣಿಯು ಮುಸುಕಲಿ। ಶರನಿಧಿ ಶಿವನಾಣೆ ॥ ಎರಡಾಡುವೆನೆಂ । ದರಿಯದಿರೆಲೆ ಶುಭ । ಚರಿತನೆ ನಿನ್ನಾಣೆ ॥ ೨ ॥ ಮನದೊಳಗಿರುವದ । ನೆನಗುಸುರುವದಿ । ನ್ನೆನಲಾತನ ನುಡಿಗೆ ॥ ಮನವೊಲಿದದನ । ರ್ಜುನನಿಗೆ ತೋರುತ । ಮುನಿಯುಸುರಿದನವಗೆ ॥ ೩ ॥ ॥ ೧೧೭ ॥

ಭಾಮಿನಿ.

ವನಚರೇಶ್ವರ ಲಾಲಿಸೈ ನೀ । ನನಘಮತಿಯಹುದಾದರಿತ್ತಪು । ದೆನಗೆ ನಿನ್ನಯ ಬಲದ ಹಸ್ತದ ಹೆಬ್ಬೆರಳನರಿದು ॥ ಘನತರದ ದಕ್ಷಿಣೆಯಿದೇ ಯೆಂ । ದೆನಲು ತಲೆಯನು ತೂಗಿ ಭಾಪುರೆ । ಯೆನುತ ಖಾತಿಯನುಂಗಿ ನುಡಿದನು ಶಬರನಾತಂಗೆ ॥ ೧ ॥ ॥ ೧೧೮ ॥

ರಾಗ ಕಾಪಿ, ಅಷ್ಟತಾಳ.

(ಧಾಟಿ— ಏನಿದೂ । ಸೀತೆ । ಏನಿದೂ ॥ ಎಂಬಂತೆ.)

ಏನಿದೂ । ಸ್ವಾಮಿ । ಏನಿದೂ ॥ ಪಲ್ಲ ॥ ಏನಿದು ನಿಮ್ಮಯ ಮಾತ ಕೇಳ್ದೆನಗೆ। ಆನಂದವಾಯ್ತೆಣೆಗಾಣೆನು ನಿನಗೆ ॥ ಅನುಪಲ್ಲ ॥ ಕುಲದೊಳುತ್ತಮ ಭರದ್ವಾಜನಂದನನು । ತಿಳಿದಿರ್ಪೆ ವೇದವೇದಾಂಗವೆಲ್ಲವನು ॥ ಕಲುಷರಹಿತ ನೀನೆಂದರಿತಿಹೆನು । ಕಲಿತೆಯಾವಲ್ಲಿಂಥಾ ಕೆಲಸವೆಲ್ಲವನು ॥ ೧ ॥ ಸರಳವಿದ್ಯೆಗೆ ನೀಚನೆಂದೆನ್ನ

ನೀನು । ಜರೆದರು ನಿನ್ನಯ ಮೂರ್ತಿಯ ನಾನು ॥ ವಿರಚಿಸಿ ಪೂಜಿಸಿ ಕಲಿತ ವಿದ್ಯೆಯನು । ಪುರುಷಾರ್ಥವನು ಗೈದೆ ಭಳಿರೆ ಮೆಚ್ಚಿದೆನು ॥ ॥ ೨ ॥ ಮನವೆಂತು ಬಂತು ವಿಶ್ವಾಸಘಾತಕಕೆ । ನಿನಗೇತಕೆನ್ನ ಹೆಬ್ಬೆರಳು ನೋಡಲಿಕೆ ॥ ಎನಿತಪರಾಧಗೈದವ ನಾನು ಹೇಳು । ತನುವೆ ಬೇಕಾದರೂ ಕೊಡುವೆನು ಕೇಳು ॥ ೩ ॥ ॥ ೧೨೧ ॥

ರಾಗ ಮಧ್ಯಮಾವತಿ, ಏಕತಾಳ.

(ಧಾಟಿ—ಹರಿಯೆ ಲಾಲಿಸು ನಿನ್ನ ಮರೆಹೊಕ್ಕ ಜನರಿಂಗೆ ॥ ಎಂಬಂತೆ.)

ಎನುತ ಹೆಬ್ಬೆರಳ ಖಂ । ಡನವನಾರಂಭಿಸ । ಲನಿತರೊಳ್ದ್ರೋಣನಾತನ ಕೈಯ ಹಿಡಿದು ॥ ವನದ ಪಾಲಕನೆ ನೀ । ನನು ತಾಪಗೊಳಬೇಡ । ನಿನಗೊಂದನೊರೆವೆ ಕೇಳೆನುತ ಮತ್ತೆಂದ ॥ ೧ ॥ ನೆರೆನಿನ್ನ ಗುಣಗಳ । ಪರಿಕಿಸಲ್ಕೈತಂದು । ಬೆರಳ ಬೇಡಿದೆನು ಕ । ತ್ತರಿಸಬೇಡದನು ॥ ಗುರುಭಕ್ತಿಯಲಿ ನಿನ್ನ । ಸರಿಯಾದ ಭಟರಿಲ್ಲ । ವರಿತೆನು ಸಾಕೆನ್ನ । ಲೊರದನಾಶಬರ ॥ ೨ ॥ ನುಡಿದ ಭಾಷೆಯ ಮೀರಿ । ನಡೆವವನಲ್ಲೆಂದು । ಕಡಿದು ಬೆರಳ ದ್ರೋಣ । ನಡಿಯ ಮುಂದಿರಿಸಿ ॥ ಪೊಡಮಟ್ಟನಾತನ । ದೃಢದ ಭಕ್ತಿಗೆ ಮೆಚ್ಚಿ । ಪಿಡಿದೆತ್ತುತಿಂತೆಂದ । ನೊಡನೆ ಕುಂಭಜನು ॥ ೩ ॥ ॥ ೧೨೪ ॥

ವಾರ್ಧಿಕ.

ಏಕಲವ್ಯಕನೆ ಕೇಳ್ಚಿಂತೆಯಿಂ ನೋಯದಿರ್ । ಲೋಕದೊಳ್ನಿನ್ನಂತೆ ಗುರುಭಕ್ತಿಮಂತರಂ । ನಾಕಾಣೆನದರಿಂದ ನಿನಗುತ್ತರೋತ್ತರಂ ತಪ್ಪದಾಗಲಿಯೆನುತ್ತಾ ॥ ಆಕುಂಭಜಾತನಾಶೀರ್ವಾದಮಂ ಗೈವು । ತಾಕಿರಾತೇಶ್ವರನನೊಡಬಡಿಸಿ ಬೀಳ್ಕೊಂಡು । ಲೋಕೈಕವೀರ ಫಲ್ಗುನ ಸಹಿತ ಬಂದು ನಿಜಪುರಿಗಾತನಿಂತೆಂದನು ॥ ೧ ॥ ॥ ೧೨೫ ॥

ಭಾಮಿನಿ.

ಎನಗೆ ಶಬರನು ಶಿಷ್ಯನೆಂತೆಂ । ಬನುವನೀಕ್ಷಿಸಿ ತಿಳಿದೆಯ ಲ್ಲೈ । ನಿನಗೆ ಸಮಬಲನಿಲ್ಲವೆನುತಾನೊರೆದ ನುಡಿಗಾಗಿ ॥ ವನಚರ ನಿಗಿಂತೆಸಗಿದೆನು ನೀ । ನನುವರದೊಳಸಮಾನಬಲ ನಿ । ನ್ನೆನುತ ಪಾರ್ಥನ ಚಿತ್ತಸಂಶಯವನು ನಿವಾರಿಸಿದ ॥ ೧ ॥ ॥ ೧೨೬ ॥

ರಾಗ ಕೇತಾರಗೌಳ, ಅಷ್ಟತಾಳ.

ಜನಪ ಕೇಳ್ಬಳಿಕೊಂದು । ದಿನ ಗುರು ಭೀಷ್ಮನ । ಮನೆಗೈದ ಲೀತನನು ॥ ವಿನಯದೊಳಾತನಾ । ನನವಿತ್ತು ಮನ್ನಿಸೆ । ಮನವಲಿ ದಿವನೆಂದನು ॥ ೧ ॥ ಸುರನದೀಸುತನೆ ಕೇ । ಳರುಹಿದೆನೀದಿನ । ಪರಿಯಂತವಿಲ್ಲಿ ನಾನು ॥ ಭರತಕುಲಜರಿಗೆ । ಶರಚಾಪವೇದಾದಿ । ಸರುವ ಸುವಿದ್ಯೆಯನು ॥ ೨ ॥ ಇನಿಬರೊಳಾವನು । ಘನಧೀರನೆಂಬುದ । ನನಘ ನಿಮ್ಮೆಲ್ಲರಿಗೆ ॥ ಅನುವಿಂದ ತೋರುವ । ಮನವಿದೆ ತನ್ನೊಳ । ಗೆನೆಪೇಳ್ದನವನವಗೆ ॥ ೩ ॥ ಎಲೆ ಮಹಾಮತಿಗಳೆ । ಹಲವಂಗದಿಂದಲಿ । ಬಳಲಿದಿರಯ್ಯ ನೀವು ॥ ಬಿಲುವಿದ್ಯೆಯೆಲ್ಲವ । ಕಲಿಸುವ ಗುರುತನ । ಸುಲಭವಲ್ಲಿದು ನಿಜವು ॥ ४ ॥ ಮಾರಾರಿ ಮೊದಲುಕು । ಠಾರಿಯನಂತರ । ನಾರಾಚವಿದ್ಯೆಯೊಳು ॥ ಮೂರುಲೋಕದೊಳಿಲ್ಲ । ವೀರ ನಿಮ್ಮವೊಲೆಂದು । ತೋರುವದೆನಗೀಗಲು ॥ ೫ ॥ ಇಂದು ಬಾಲಕರಿಗೆ । ಬಂದ ವಿದ್ಯಾವಳಿ । ಯಂದವ ನೋಳ್ಪರಿನ್ನು ॥ ಮುಂದೇನಮಾಡಬೇ । ಕೆಂದು ಪೇಳುವದೆನ । ಲೆಂದನಾಕುಂಭಜನು ॥ ೬ ॥ ॥ ೧೩೨ ॥

ವಾರ್ಧಿಕ.

ಪರಮ ಧಾರ್ಮಿಕನೆ ಕೇಳ್ಮೊದಲೊಂದು ಶುಭದಿನವ । ನಿರಿಸಿ ಬಳಿಕೊಂದು ರಂಗಸ್ಥಲವನಾಹಕೃತಿ । ಗರಿತು ಮಾಡಿಸಿ

ಮನಕೆ । ಬಂದ ಶೋಭಾಕರವನೆಸಗಿ ಲೇಖನ ಮುಖದೊಳು ॥ ಕರಸುವದು ವಿದ್ಯಾಪರೀಕ್ಷೆಗೆಂದಖಿಲ ಭೂ । ಪರನವರ ಮುಂದರಿತ ವಿದ್ಯೆಯುಂ ತೋರ್ದರೀ । ಧರಣಿಪಾತ್ರಜರಿವರೊಳಾವನುತ್ತಮನವನೆ ಪ್ರಕಟಬಲನಹನೆಂದನು ॥ ೧ ॥ ಗುರುವೆಂದ ನುಡಿಗೇಳ್ದು ಭೀಷ್ಮನಾನಂದದಿಂ ಕರೆಸಿ ವಿಪ್ರರನಿಷ್ಟಕಾರಿಯುಕೆ ಶುಭದಿನವ । ನೊರೆವುದೆನೆ ಮುಂದೆ ಬಹಸಿತಪಕ್ಷಪಂಚಮಿಯು ದಿವಸವುತ್ತಮವೆನುತ್ತಾ ॥ ಅರುಹಲವರವರಿಗುಡುಗೊರೆಯಿತ್ತು ಬೀಳ್ಕೊಟ್ಟು । ಗುರುವಾಜ್ಞೆಯಂತಖಿಲ ಕಾರ್ಯಮಂ ಮಾಡಿಸುತ । ಅರಸರ್ಗೆ ಲೇಖನಂಗಳನೆಂದು ವಿದುರಾದ್ಯರಿಗೆ ನುಡಿದನು ॥ ೨ ॥ ॥ ೧೩೪ ॥

ಭಾಮಿನಿ.

ಬರೆಸಿದರು ಲಿಖಿತವನು ಮಂತ್ರೀ । ಶ್ವರರು ಮಿಗೆ ನಾನಾದಿಗಂತದ । ಧೊರೆಗಳಿಗೆ ಕಳುಹಿಸಿದರದನನುಚರರ ಮುಖದಿಂದ ॥ ಪುರವರವನವರಾಜ್ಞೆಯಲಿ ಶೃಂಗರಿಸಿದರು ಬಹು ದೇಶದಾಳ್ಗಳು । ನೆರೆವುತಿರ್ದರದೇನನೆಂಬೆನು ಭೂಪ ಕೇಳೆಂದ ॥ ೧ ॥ ॥ ೧೩೫ ॥

ಸಾಂಗತ್ಯ.

ಹಸ್ತಿನಪುರದಿ ಮ । ಹೋತ್ಸವವೆನುತಲ್ಲಿ । ಮೆತ್ತಿಗೆಯುವರು ಶಿಲ್ಪಿಗರು ॥ ಚಿತ್ರಕರಿಂತು ಸ । ಮಸ್ತ ದೇಶದ ನಾನಾ । ಕೃತ್ಯದ ಜನರು ಕೂಡಿದರು ॥ ೧ ॥ ಪುರದ ಮುಂಗಡೆಯಲ್ಲಿ । ಧರೆಯ ಶೋಧಿಸಿ ನೀರ । ನೆರೆದು ಪೆಟ್ಟಿಸಿ ರಂಗಸ್ಥಳವ ॥ ತರದಿ ಮಾಡಿದರು ಹ । ನ್ನೆರಡುಯೋಜನವಾದ । ಪರಿಮಾಣದಿಂದ ರಂಜಿಸುವ ॥ ೨ ॥ ರಂಗದೊಳಲ್ಲಲ್ಲಿ । ತುಂಗಸೌಧಗಳ ಗೃ । ಹಂಗಳನೊಲಿದು ಮಾಡಿದರು ॥ ಹಿಂಗಡೆಯೊಳಗೆ ನಾ । ನಾಂಗದ ಮಾರಾಟ । ದಂಗಡಿಗಳನೆಸಗಿದರು ॥ ೩ ॥ ಜಗಲಿ ಗೋಡೆಗಳ ಮಾ । ಳಿಗೆಯ ಚಾವಡಿಯ

ಮೆ | ತ್ತಿಗೆಯಾಯ್ತು ಬಲು ಚಂದದಿಂದ || ಮಿಗೆ ವಜ್ರವೈಡೂರ್ಯಾ | ದಿಗಳನಲ್ಲಲ್ಲಿಟ್ಟು | ಸೊಗಸುದೋರಿದರಂದದಿಂದ || ೪ || ಕೇರಿ ಕೇರಿಗಳಲ್ಲಿ | ತೋರಣಾದಿಗಳು ವಿ | ಸ್ತಾರಪತಾಕದಂಡಗಳು || ಓರಣದಿಂದ ಚಿ | ತ್ತಾರದ ಗೊಂಬೆಗ | ಳೋರಂತೆ ಹೊಳೆದವು ಕೇಳು || ೫ || || ೧೪೦ ||

ರಾಗ ಮಧ್ಯಮಾವತಿ, ತ್ರಿಪುಟತಾಳ.

(ಧಾಟಿ---ಅರಸಗಿಂತೆನುತವನು ॥ ಎಂಬಂತೆ.)

ಕೇಳಯ್ಯ ನೃಪತಿಯುಂಡು | ಬಂದುದು ಸತ್ಯ | ಶೀಲ ವಿಪ್ರರು ತಿಳಿದು || ಹೇಳಿದ ದಿವಸಜ | ನಾಳಿಯಾವಾರ್ತೆಯು | ಕೇಳಿ ಯಾನಂದವ ತಾಳಿಯೈತಂದುದು | ಚೋಳಕೇರಳ ಗುಜ್ಜರದನೇ | ಪಾಳಕೋಸಲ ಕೊಂಕಣದ ಪಾಂ | ಚಾಲನೊಬ್ಬನ ಹೊರತು ಮಿಕ್ಕ ನೃ | ಪಾಲಕರು ನಡೆತಂದರಲ್ಲಿಗೆ || ೧ || ಪುರಕೆ ಬಂದವರ ಕಂಡು | ಬೇಗದಲಿ ಸ | ತ್ಕರಿಸಿ ಸಂತೋಷಗೊಂಡು | ಅರಿದವರವರಿಗೆ | ಸರಿಯಾಗಿ ಬಹು ಪರಿ | ಪರಿಯ ವಸ್ತುಗಳಿಂದ | ಭರಿತವಾಗಿರುವ ಮಂ || ದಿರಗಳನು ಮಿಗೆ ಪಾಕಭೋಜನ | ಕರಣಕಾ ವಿದುರಾದಿ ಮಂತ್ರೀ | ಶ್ವರರು ಕೊಡಲು ಜನೌಘವದನಾ | ಚರಿಸಿ ಸಭೆಯಲಿ ನೆರೆದರಾಗಲೆ || ೨ || ನೆಲೆಯುಪ್ಪರಿಗೆಗಳಲಿ | ನಾರಿಯರೇರಿ | ನೆಲಸಿದರೊಗ್ಗಿನಲಿ || ಚಲುವೆ ಗಾಂಧಾರಿ ನಿ | ರ್ಮಲಮತಿಪೃಥೆಯರು | ಲಲನೆಯರೊಡನಲ್ಲಿ | ಕುಳಿತರಾನಂದದಿ || ಬಳಿಕ ಕುರಿಕೋಣಗಳ ಹಿಂಡನು | ತಲೆಗಡಿದು ಬಹು ಭೂತವರ್ಗಕೆ | ಬಲಿಯನಿತ್ತು ವಿಶಾಲ ರಂಗ | ಸ್ಥಲದ ರಕ್ತಕ್ಷಣೆಗೈದರಂದದಿ || ೩ || || ೧೪೩ ||

ಭಾಮಿನಿ.

ಅರಸ ಕೇಳ್ ಧೃತರಾಷ್ಟ್ರ ವಿದುರಾ | ದ್ಯರು ಸಮೇತ ನದೀಜನೆಸದನು | ಮೆರೆವ ಸಭೆಯಲಿ ಮುಂದೆ ಕನಕದ ಕಟ್ಟಿಗೆಯ

ಕರದ || ಗುರುಜ ಕೃಪರವಧಾನಜೀಯೆಂ | ದೊರೆವೃತ್ತೈತರೆ ಛತ್ರಗಳ ಚಾ | ಮರದ ವಾದ್ಯದ ಶೋಭೆಯಲಿ ನಡೆತಂದನಾ ಚಾರ್ಯ || ೧ || || ೧೪೪ ||

ರಾಗ ಸೌರಾಷ್ಟ್ರ, ತ್ರಿಪುಟತಾಳ.

ಬಂದು ಭದ್ರಾಸನದಿ ಕುಳ್ಳಿರ | ಲಂದು ಭೇರಿ ನಗಾರಿತ ಮ್ಮಟ | ದುಂದುಭಿಗಳೋರಂತೆ ಮೊಳಗಿದ | ವಂದದಿಂದ || ೧ || ಗಳಿಗೆ ಬಂದುದು ಬರಲಿ ಕುವರರು | ತಳುವದೆಂಬಾಜೋಯಿಸರ ಕಳ | ಕಳವನಾಲಿಸಿ ಯಮುಜನೆದ್ದನು | ಚಳಕದಿಂದ || ೨ || ಗುರು ಸರಿತ್ಸುತ ಮುಖ್ಯಮಾನ್ಯರಿ | ಗೆರಗಿ ಬಹು ಶಸ್ತ್ರಾಸ್ತ್ರವಿದ್ಯಾ | ಪರಿ ಣತಿಯ ತೋರಿದನು ಕೇಳ್ವರಿ | ಪರಿಯೊಳವನು || ೩ || ತೇರನಷ್ಟ ವನಾಮದೇಭವ | ನೇರಿ ಸಂಗರಗೈವುದನು ಪದ | ಚಾರಿತನದಲಿ ಕಾದುವಂದವ | ತೋರಿಸಿದನು || ೪ || ಭಳಿರೆ ಶಶಿಕುಲತಿಲಕ ಪಾರ್ಥಿವ | ಕಲೆಯೊಳತುಳ ಸಮರ್ಥ ನೀನೆಂ | ದೊಲಿದು ಪೊಗ ಳಿತು ನೆರೆದ ಸಭೆ ನಿ | ರ್ಮಲನ ಮತಿಯ || ೫ || ತನತನಗೆ ತೋರಿ ದರು ಫಲುಗುಣ | ನನುಜರಾದುಶ್ಶಾಸನಾದಿಗ | ಳನುವರದ ಲಕ್ಷ ಣವನೆಲ್ಲವ | ಘನತೆಯಿಂದ || ೬ || || ೧೫೦ ||

ರಾಗ ಕಾಂಬೋಧಿ, ಝಂಪೆತಾಳ.

ಅದರ ಮೇಲೈತಂದು | ಮುದದಿಂದಲಖಿಲದೇ | ಶದ ನೃಪಾ ಲರ ಕುಮಾರಕರು || ಕದನಗಲಿತನದ ವಿ | ದ್ಯದವಿಭೇದನಗಳನು | ವಿಧವಿಧದೊಳಲ್ಲಿ ತೋರಿದರು || ೧ || ಪೊಗಳುತಿಹ ಪಾಠಕಾ | ಳಿಗಳ ಬಹು ವಾದ್ಯಗಳ | ಝುಗಝುಗಿಪ ಛತ್ರ ಚಾಮರದ || ಹಗಲು ಕೈದೀವಿಗೆಯ | ಬಗೆಬಗೆಯ ಬಿರಿದುಗಳ | ನಿಗಡಕುರುಪತಿ ಬಂದು ಮೆರೆದ || ೨ || ಗುಲ್ಲೇತಕನುವರದ | ಮಲ್ಲ ಕೌರವ

ಬಂದ । ನೆಲ್ಲರಂ ಸುಮ್ಮನಿರಿಯೆಂದು ॥ ಅಲ್ಲಲ್ಲಿ ಗಜಬಜವ । ನಿಲ್ಲಿಸಿದರಾ ಸ್ಥಳದೊ । ಳುಳ್ಳ ನೃಪಕಿಂಕರರು ನಿಂದು ॥ ೩ ॥ ಬಂದು ದ್ರೋಣಾದ್ಯರಿಗೆ । ವಂದಿಸುತಲಂಧಕನ । ನಂದನನು ಧನುವ ಝೇವಡೆದು ॥ ಸ್ಯಂದನವನೇರ್ದಲ್ಲಿ । ನಿಂದು ಬಹು ಮಂತ್ರಾಸ್ತ್ರ ದಂದವನು ತೋರ್ದನನುವರಿದು ॥ ೪ ॥ ಗದೆ ಮುಸಲವಸಿಪರ । ಶ್ವಥ ಮುಖ್ಯ ಕೈದುಗಳ । ಕದನದಲಿ ಸಕಲ ವಿದ್ಯೆಯಲಿ ॥ ವದಗಿ ತೋರಿದರಾತ । ಗಿದಿರಿಲ್ಲ ಭಳಿರೆನುತ । ಲೊದರಿತಾ ಸ್ಥಾನವಗಲದಲಿ ॥ ೫ ॥ ಈರೀತಿಯಿಂದೆಲ್ಲ । ರೋರಂತೆ ಹೊಗಳೆ ಗಾಂ । ಧಾರಿಯಾಜ್ಞೆಯಲಿ ಬಳಿಕಂದು ॥ ವಾರಿರುಹವದನೆಯರು । ಭೋರನಲ್ಲಿಗೆ ಬಂದು । ಕೌರವಗೆ ನುಡಿದರಿಂತೆಂದು ॥ ೬ ॥ ॥ ೧೫೬ ॥

ರಾಗ ಕಲ್ಯಾಣಿ, ಏಕತಾಳ.

(ಧಾಟಿ—ಭೂಮಿಪಾಲಕ ಲಾಲಿಸು ॥ ಎಂಬಂತೆ)

ಸಾಕು ಸಾಕೆಲೆ ಮಗನೆ । ಪೌರುಷವಿಷ್ಟೆ । ಸಾಕು ಸಾಕೆಲೆ ಮಗನೆ ॥ ಪಲ್ಲ ॥ ಕಲಿತ ವಿದ್ಯಂಗಳನು । ಯೆಲ್ಲವ ತೋರ್ದ । ರುಳಿವೆಯೆಂತಕಟ ನೀನು ॥ ಕುಳಿತವರೆಲ್ಲರು । ಭಳಿಭಳಿರೆಂದರು । ಬಳಿಕೀ ಫಲಗಳು । ತಿಳಿವುದು ನಡೆನಡೆ ॥ ೧ ॥ ಇಷ್ಟು ಮಂದಿಗಳೊಳಗೆ । ಎಲ್ಲರಿಗೊಂದೆ । ದೃಷ್ಟಿಯೆ ಪೇಳೆನಗೆ ॥ ದೃಷ್ಟಿನಿಪಾತದಿ । ಕೆಟ್ಟರೆ ನಿನ್ನನು । ಮೆಟ್ಟರೆದಾಯಿಗ । ರೊಟ್ಟಾಗುತ್ತಲೆ ॥ ೨ ॥ ನಿನ್ನ ಪಿತಾಮಹಿಯು । ಗರ್ಭಿಣಿಯಾಗಿ । ಮುನ್ನ ಶೋಭಿಸುವಾಗಲು ॥ ಇನ್ನೇನೆಂದರೊ । ಕುನ್ನಿಗಳದರಿಂ । ನಿನ್ನಯ ಪಿತಸಿಗೆ । ಕಣ್ಣೆರಡಿಲ್ಲವು ॥ ೩ ॥ ॥ ೧೫೭ ॥

ವಾರ್ಧಿಕ.

ಈರೀತಿಯಾಡುತಾನಾರಿಯರ್ ದೃಗ್ವಿಕ್ಷೇಪ । ಬಾರದಂತವಗೆ ಕೆನ್ನೀರನಾಸ್ಯಕೆ ಸುಳಿವು । ತಾರತಿಯುನೆತ್ತಿ ಮುಗುಳೋರಂತೆ ನಾನಾ

ವಿ। ಕಾರದ ಚಿಕಿತ್ಸೆಗಳನು ॥ ಓರಣದೊಳೆಸಗಲದ। ನೋರೆಯೊಳ್ ಕಂಡು ಮದ। ವಾರಣಕೆ ಮಲತು ಬಹ। ಘೋರ ಕೇಸರಿಯಂತೆ। ಭೂರಿ ಭುಜಬಲನಾಸಮಿರಜಂ ಸಭೆಗೆ ಪ್ಕೈ। ದೋರಿದನದೇನೆಂಬೆನು ॥ ೧ ॥ ॥ ೧೬೦ ॥

ರಾಗ ತೋಡಿ, ಅಷ್ಟತಾಳ.

(ಧಾಟಿ---ಚರರೆಂದನುಡಿಗೇಳುತ್ತಾ ॥ ಎಂಬಂತೆ.)

ಗುರು ಭೀಷ್ಮರಿಗೆ ನಮಿಸಿ। ಭೀಮನು ಬಹು। ಪರಿಯ ವಿದ್ಯೆಯ ತೋರಿಸಿ ॥ ಮೆರೆಯಲಾ ಸಭಿಕರು। ಕುರುಕುಲದೊಡೆಯನಿಂ। ದೆರಡು ಮಡಿಯಲೀತ। ಧುರಧೀರನೆಂದರು ॥ ೧ ॥ ಎಲವೋ ಕೌರವನೇ ಕೇಳು। ಪೋಗದಿರೀಗ। ನಿಲು ನಿಲು ಧುರಕೆನ್ನೊಳು ॥ ಕಲಿಗಳಾರೆಂಬುದ | ತಿಳಿಯಲಿ ಸಭೆಯೆಂದು | ಕಲಿ ಭೀಮನಾತನ। ಹಳಚಲಬ್ಬರಿಸಿದ ॥ ೨ ॥ ಕೆರಳಿ ದುರ್ಯೋಧನನು | ಗರ್ವದೊಳೆನ್ನ | ಕರೆದೆಯಾ ರಣಕೆ ನೀನು ॥ ಕರೆಸಿಕೋ ನಿನ್ನ ಸೋ। ದರರ ಬೆಂಬಲಕೆಂದು | ಶರಗಳನೆಸುತಲಾ | ಮರುತಜಗಿದಿರಾದ ॥ ೩ ॥ ಗದೆಗೊಂಡು ಪವನಜನು | ತರುಬಲಾತ | ಗಿದಿರಾಗಿ ಕೌರವನು ॥ ಹೆದರದೆ ಸರಿಯಾಗಿ | ಕದನವಗ್ಗಯಲು | ಕೆದರಿತು ಸಭೆಯುವ | ರದುಭುತ ಕೃತಿಯಿಂದ ॥ ೪ ॥ ॥ ೧೬೪ ॥

ಸಾಂಗತ್ಯ.

ಅಹಹ ಕೆಟ್ಟಿತು ಕಾರ್ಯ | ಸಹಜವಿದಲ್ಲೆಂದು | ಗ್ರಹಿಸುತ್ತ ಕೃಪ ಗುರುಸುತರು ॥ ವಹಿಲದಿ ಪಿಡಿದತಿ। ಸಹಸದಿಂದವರ ವಿ | ಗ್ರಹವನಲ್ಲಿಯೆ ಬಿಡಿಸಿದರು ॥ ೧ ॥ ಬರಿಯ ಮತ್ಸರದ ಬಂ | ಧುರದ ಕುಮಾರರು ಸರಿಯಲೊಂದೆಡೆಗಿಲ್ಲಿಗೀಗ | ಅರಿಭಯಂಕರನೆನ್ನ | ವರಶಿಷ್ಯಾಗ್ರಣಿ ಪಾರ್ಥ | ಬರಲೆಂದನಾದ್ರೋಣನಾಗ ॥ ೨ ॥

ನೋಟಕಜನದ ಬೊ । ಬ್ಬಾಟವು ನಿಲ್ಲಲಿ । ನಾಟಕವಾದ್ಯ ಶೋಭಿ ಸಲಿ ॥ ಪಾಠಕಗಣದ ಕೊಂ । ಡಾಟದಿ ನೀರ ಕಿ । ರೀಟನೈತರಲಿ ಬೇಗದಲಿ ॥ ೩ ॥ ಎಂದ ದ್ರೋಣನ ಮಾತಿ । ನಿಂದ ಮೊದಲೆ ರೀತಿ । ಯಿಂದಾದುದೆಲ್ಲ ಕಾರ್ಯಗಳು ॥ ಇಂದ್ರಜನೈತಪ್ಪ । ನೆಂದು ಮೌನ ದೊಳಿರ್ದ । ವಂದು ನೋಟಕರ ತಂಡಗಳು ॥ ೪ ॥ ॥ ೧೬೮ ॥

ರಾಗ ಪೂರವಿ, ಏಕತಾಳ.

ಮುಗಿಲಿನ ಮುಸುಕನು । ಬಗಿದೈತರುತಿಹ । ಗಗನಮಣಿಯು ತೆರದಿ ॥ ವಿಗಡ ಧನಂಜಯು । ವಿುಗೆ ನೈದೋರಲು । ನಿಗುಚಿತು ಜನಜಲಧಿ ॥ ೧ ॥ ಗುರುವಿಗೆ ಭೂಸುರ । ಸರಣಿಗೆ ಭೀಷ್ಮಗೆ । ಹಿರಿ ಯಯ್ಯಗೆ ನಮಿಸಿ ॥ ಮರುತಜ ಯಮಜರ । ಚರಣ ದ್ವಯಂಗಳಿ । ಗೆರಗಿದನಯವೆರಸಿ ॥ ೨ ॥ ಜನನಿಗೆ ಮಣಿದನು । ಮನದಲಿ ಸಂಕ್ರಂ । ದನ ಮೊದಲಾಗಿರ್ದ ॥ ಅನಿಮಿಷರಿಗೆ ಶಿರವನು ಮೇಲೆತ್ತುತ । ವಿನ ಯದಿ ವಂದಿಸಿದ ॥ ೩ ॥ ಇದೆ ಭಯಭಕ್ತಿಯು । ವಿಧಿಯೂರ್ಜಿತ ಕಲೆ । ಗಿದೆ ಮೂಲಸ್ಥಾನ ॥ ಇದೆ ಭೂಷಣವೆನು । ತದನೆಲ್ಲವ ಕಂ । ಡೊದವಿದುದಾಸ್ಥಾನ ॥ ೪ ॥ ॥ ೧೭೦ ॥

ಭಾಮಿನಿ.

ಪದುಮಲೋಚನ ಪಾರ್ವತೀಪ್ರಿಯ । ಮಧುನಿಷೂದನ ಮದ ನಮರ್ದನ । ವಿದಿತ ಶಾಂತಾಕಾರ ವಿಶ್ವವಿಭೀಷಣಾಕಾರ ॥ ಸದಮ ಲಾತ್ಮಕ ಸರ್ವತೋಮುಖ । ತ್ರಿದಶನುತಯೆನುತೈದೆ ಹರಿಹರ । ಪದ ಯುಗಧ್ಯಾನದಲಿ ಫಲುಗುಣನೇರಿದನು ರಥವ ॥ ೧ ॥ ॥ ೧೭೩ ॥

ವಾರ್ಧಿಕ.

ಅರಸ ಕೇಳರ್ಜುನಂ ಚಾಪಮಂ ಧ್ಯೋಂಗೈದು । ತರದಿಂದ ಲಾಗ್ನೇಯ ಬಾಣ ವಾರುಣವಿಶಿಖ । ಗಿರಿಶಿಖೀಮುಖ ವಜ್ರನಾರಾಚ

ವಾಯುವ್ಯಶರ ತಿಮಿರವಮಾರ್ಗಣವನು ॥ ತರಣಿಸಾಯಕ ಫಣಿ ಕಲಂಬ ಗಾರುಡ ಶಲ್ಯ । ಪರಮೇಷ್ಠಿ ನಾರಾಯಣಾಸ್ತ್ರ ಮುಂತಾದ ಬಹು । ಪರಿಯ ಮಂತ್ರಾಸ್ತ್ರಗಳನೆಚ್ಚೊಂದನೊಂದರಿಂ ಸಂಹರಿಸಿ ತೋರಿಸಿದನು ॥ ೧ ॥ ॥ ೧೭೪ ॥

ರಾಗ ಭೈರವಿ, ಏಕತಾಳ.

ರಥ ಯುದ್ಧಗಳೆಲ್ಲವನು । ಆ । ರಥದಲಿ ತೋರಿದನವನು ॥ ಪ್ರತಿ ಲೋಕದ ಪ್ರತಿಭಟರ । ರಣ । ಗತಿಯನು ತೋರ್ದನು ಚತುರ ॥ ೧ ॥ ಕರಿ ತುರಗಂಗಳನೇರಿ । ಪರಿ । ಪರಿಯನುವರವನು ತೋರಿ ॥ ಚರಣ ಚರತ್ವವನಾಂತು । ಧುರ । ದಿರವನು ತೋರ್ದನು ನಿಂತು ॥ ೨ ॥ ಗದೆ ಮುದ್ಗರ ಖಡುಗಾದಿ । ಬಹು । ವಿಧದಾಯುಧದಲಿ ಕಾದಿ ॥ ಹೆದರದೆ ಗೆಲುವಂದವನು । ತೋ । ರಿದನಾಸಭ್ಯರಿಗವನು ॥ ೩ ॥ ಸಕಲವ್ಯೂಹಂಗಳನು । ತ । ತ್ಸಕಲ ವಿಭೇದನಗಳನು । ಸಕಲರ ಮಾಯಕಗಳನು । ನೋ । ಟಕರಿಗೆ ತೋರಿದನವನು ॥ ॥ ೪ ॥ ಭಳಿರೆ ನೃಪಾನ್ವಯದೀಪ । ನೀ । ನಿಳೆಯಲಿ ಸುರಪತಿರೂಪ ॥ ಬಲುಭಟನೀನೆಯೆಂದು । ಜನ । ಜಲಧಿ ಪೊಗಳಿತವಗಂದು ॥ ೫ ॥ ಸುರರಂಬರದಲಿ ನಲಿದು । ನಿಜ । ಸುರದುಂದುಭಿಯನು ಬಡಿದು ॥ ಅರಲ ಮಳೆಯ ಸುರಿಸಿದರು । ಆ । ನರನ ಶಿರಸ್ಸಿನಲವರು ॥ ೬ ॥ ॥ ೧೮೦ ॥

ಭಾಮಿನಿ.

ಎಲೆ ನೃಪತಿ ಕೇಳ್ಸುಜನ ಕೆಡುವನು । ಖಲರಸಖ್ಯದೊಳೆಂಬ ಮಾತಿದು । ಫಲಿಸಿತಾಕರ್ಣನಲಿ ರವಿ ಕುಂತಿಯರಲುದಿಸಿರ್ದು ॥ ಕಲುಷಮತಿ ಕೌರವನಸಖ್ಯವ । ಬಳಸಿದುದರಿಂದವನು ವೈಷ್ಣವ । ಫಲುಗುಣನ ಹಗೆತನವ ತಳೆದನು ಪೇಳಲೇನೆಂದ ॥ ೧ ॥ ॥ ೧೮೧ ॥

ಕಂದಪದ್ಯ.

ಇಂದ್ರಜನಂ ಪೊಗಳುವ ಸಭೆ। ಯಂದವನೀಕ್ಷಿಸುತ ಕೋಪ ದಿಂ ಕಿಡಿಯಿಡುತಂ ॥ ಬಂದಾಸ್ಥಾನದೊಳಾರ್ಭಟೆ । ಯಿಂದಾ ಕಲಿ ಕರ್ಣ ನುಡಿದನತಿ ನಿಷ್ಠುರದಿಂ ॥ ೧ ॥ ॥ ೧೮೭ ॥

ರಾಗ ಸೌರಾಷ್ಟ್ರ, ತ್ರಿಪುಟತಾಳ.

ನರನ ಹೊಗಳುವ ನಾಯಿಗಳ ನಿ । ಲ್ಲಿರಿಸಲೇತಕೆ ನೂಕಿರತ್ತಲು । ಬರಿದೆ ಕೊಂಡಾಡುವರು ಗುಣಗಳ । ನರಿಯದಿವರು ॥ ೧ ॥ ಮೇರುವನು ಮುರಿದನೆ ಮಹೇಶನ । ನೂರ ಹೊರಡಿಸಿದನೆ ಮಹಾಬ್ಧಿಯ । ನಾರಿಸಿದನೇ ತಿಳಿಯಲೀ ಗೋ । ತ್ರಾರಿಸುತನು ॥ ೨ ॥ ಲೋಕರೂಢಿಯೊಳಿಪ್ಪ ವಿದ್ಯಾ । ನೀಕವನು ತೋರಿಸಿದರೇನು । ದ್ರೇಕವಾಯಿತು ಬರಿದೆ ಹೊಗಳುವಿ । ರೇಕೆ ನೀವು ॥ ೩ ॥ ನೋಡಿರೆನ್ನಯ ಪೌರುಷದ ಪಯ । ಪಾಡುಗಳ ಶಸ್ತ್ರಾಸ್ತ್ರವಿದ್ಯಾ । ರೂಢತೆಯ ತೋರಿಸುವೆನೀಗಳೆ । ಗಾಢದಿಂದ ॥ ೪ ॥ ಹೊಗಳಲ್ಕೆ ಪಾಠಕರು ಜಯ ವಾ । ದ್ಯಗಳು ಮೊಳಗಲೆನುತ್ತ ಕರವನು । ಮುಗಿದು ಗುರುವಿಗೆ ತೋರಿದನು ವಿ । ದ್ಯೆಗಳನವನು ॥ ೫ ॥ ಆತನಾ ಮತಾಹಂಕೃತಿಯ ವಿಪ । ರೀತ ವಚನದಲಖಿಲಜನ ಸಂ । ಘಾತನಿದ್ದುದು ಬೆದರುವಟ್ಟತಿ । ಭೀತಿಯಿಂದಾ ॥ ೬ ॥ ॥ ೧೮೮ ॥

ರಾಗ ಕೇತಾರಗೌಳ, ಅಷ್ಟತಾಳ.

ಇಂದ್ರಜನಾವಂಗ । ದಿಂದ ತೋರಿದನದ । ರಂದವನೆಲ್ಲವನು ॥ ಒಂದುಳಿಯದೆ ತೋರಿ । ನಿಂದು ಮಹಾಸಭೆ । ಗೆಂದನು ಕಲಿ ಕರ್ಣನು ॥ ೧ ॥ ದುಗುಡವೇನಿದು ನಿಮ್ಮ । ಮೊಗದೊಳಗೆನ್ನನು । ಹೊಗಳಿರಿ ಸಭ್ಯರೆಲ್ಲ ॥ ಬಗೆಬಗೆಯಾದ ವಿದ್ಯೆಗಳನಾಪಾರ್ಥಗೆ । ಮಿಗಿಲಾಗಿ ತೋರ್ದೆನಲ್ಲ ॥ ೨ ॥ ಎನುತಮರೇಂದ್ರನ । ತನಯನ

ಕಾಣುತ್ತ | ಮುನಿದು ನಿನ್ನಂದವನು || ಅನುವರಕಿದಿರಾಗಿ | ತನಗೆ ನೀ ತೋರಿಸೆಂ | ದೆನುತೆಚ್ಚ ನಸ್ತ್ರವನು || ೩ || ಬಳಿದು ಬಂದೆಮ್ಮ ಯ | ಪೊಳಲ ಸೇರಿದ ಕಿರು | ಕುಳ ನಿನ್ನ ಯುದ್ಧದಲೀ || ಗೆಲಿದರೆ ಗೆಲುವಲ್ಲ | ಕೆಲಸಾರು ನೀನೆಂದು | ಫಲುಗುಣ ನುಡಿದನಲ್ಲಿ || ೪ || ಧೈರ್ಯ ಸಾಹಸ ಗುಣ | ವೀರ್ಯವೆ ಬಲ ಸರ್ವ | ಕಾರ್ಯಕೆ ತಿಳಿಯಲಿನ್ನು || ಧೈರ್ಯವಿದ್ದರೆ ಕಾದು | ಧೈರ್ಯವಿಲ್ಲದಿರತ್ತ | ಸಾರೆಂದೆಚ್ಚನು ಕರ್ಣನು || ೫ || ಪರದೇಶದವಗಿಂತು | ಗರುವ ಮಡದ್ದ್ಯದೆ | ಶಿರಕದನೆಲ್ಲವನು || ಪರಿಹರಿಸುವೆನೀಗ | ಸರಿಯದೆ ನಿಲ್ಲೆಂದು | ಕೆರಳುತರ್ಜುನನೆಚ್ಚನು || ೬ || || ೧೯೪ ||

ರಾಗ ನೀಲಾಂಬರಿ, ರೂಪಕತಾಳ.

(ಧಾಟಿ—ಸೋಜಿಗವೇನೆಂಬೆ ಸುಧನ್ವಾರ್ಜುನರ ಹವವ || ಎಂಬಂತೆ.)

ಭೂರಮಣನೆ ಲಾಲಿಸು ಧುರ | ಧೀರರ ಸಮರದಲಿ | ಆರಾಜರ ಸಭೆ ನಡುಗಿತು | ಭಾರಿಯ ಭೀತಿಯಲಿ || ಪಲ್ಲ || ಗುರು ಮೊದಲಾಗಿಹ ಮಾನ್ಯರ | ಸರಣಿಸರಾಗದೊಳೀಕ್ಷಿಸು | ತಿರಲವರೀರ್ವರ ಸಮರದ | ಪರಿಯನು ಕೇಳ್ಬಳಿಕ || ನರನಸ್ತ್ರಗಳನು ಕಡಿದ | ಬ್ಬರದಲಿ ಭಾಸ್ಕರ ತನಯನು | ಸರಳಿನ ಮಳೆಗರೆದನು ಬೊ | ಬ್ಬಿರಿವುತ ಪಾರ್ಥನಲಿ || ೧ || ಘುಡುಘುಡಿಸುತಲಾಕರ್ಣಗೆ | ಕಡೆಗಾಲವ ತೋರುವೆನೆನು | ತೊಡನೆ ಮಹಾಸ್ತ್ರವನೊಂದನು | ತೊಡುತಿರಲರ್ಜುನನು || ಹಿಡಿಹಿಡಿ ಪಾರ್ಥನ ಕರ್ಣನ | ಬಿಡದಿರು ಬವರಕೆ ಕಾರಿಯ | ಕೆಡುವುದೆನುತ ಕೃಪಗುರುಜರು ತಡೆದರು ವೀರರನು || || ೨ || ಕರನಿಡಿದೆಳದಾಕರ್ಣಗೆ | ಜರೆದೆಂದನು ನೃಪನೆಲೆಯೆಲೆ | ಕಿರುಕುಳ ನಿನ್ನೆದೆಯೇಸಿದೆ | ನರನನು ಕೆಣಕುವರೇ || ಅರಸುಕುಮಾರಕನೀಗಜ | ಪುರದಧಿಕೃತನರ್ಜುನ ನೀ | ಪರದೇಶಿಯ ಕಟ

ನಿನ್ನನು । ಕರೆದವರಾರಿಲ್ಲ ॥ ೩ ॥ ಮತ್ತೆ ವಿಚಾರಿಸಲಾವ ನೃ । ಪಾತ್ಮಜನಹೆ ನೀಜನೆ ನೀ । ನತ್ತಲು ಸಾರೆನುತಾತನ । ನೊತ್ತಿದನೊಂದೆಡೆಗೆ ॥ ಮಿತ್ರಜನಾನುಡಿಯಲಿ ಮುಖ । ವೆತ್ತದೆ ಮಾನಸದಲಿ ಮರು । ಗುತ್ತಿರೆ ಖಾತಿಯೊಳಂಧಕ । ಪುತ್ರನು ಪೇಳಿದನು ॥ ೪ ॥ ॥ ೧೯೮ ॥

ರಾಗ ಕೇತಾರಗೌಳ, ಝಂಪೆತಾಳ.

ಕೇಳಿದಿರೆ ಸಭ್ಯರೆಲ್ಲ । ಈಗೆಮ್ಮ । ಮೂಲಗುರು ನುಡಿದ ಸೊಲ್ಲ ॥ ಕೇಳುವವರಿಲ್ಲವೆಂದು । ಪೇಳ್ದನೀ । ಕಾಲದೊಳಗಾತನಿಂದು ॥ ೧ ॥ ಕೊಂದನೆನ್ನಯ ಸಖಿಸನು । ಮಾತಿನಲಿ । ಸಂದೇಹವಿಲ್ಲದವನು ॥ ಇಂದು ರಾಜ್ಯಾಧೀಶನು । ಕಲಿಕರ್ಣ । ನೆಂದೆನಿಸಿ ತೋರಿಸುವೆನು ॥ ೨ ॥ ಬರಲಿ ಜೋಯಿಸರಲ್ಲಿಗೆ । ನೀಠವನು । ತರಲಿ ಚಾರಕರಿನಜಗೆ ॥ ವಿರಚಿಸುವೆನಂಗದೇಶ । ಪಟ್ಟವನು । ತರದೊಳೆಂದನು ಮಹೀಶ ॥ ೩ ॥ ಕುರುರಾಯನಾಜ್ಞೆಗಳನು । ಸಕಲರನು । ಸರಿಸಲವನರ್ಕಜನನು ॥ ಇರಿಸಿ ಭದ್ರಾಸನದೊಳು । ಪಟ್ಟವನು । ವಿರಚಿಸಿದನುತ್ಸವದೊಳು ॥ ೪ ॥ ತುಂಗಕುಚೆಯರನು ಕರೆಸಿ । ಕರ್ಣನಿಗೆ । ಮಂಗಳಾರತಿಯ ಸುಳಿಸಿ ॥ ಅಂಗದೇಶದ ರಾಜನು । ಇವನೆಂದು । ಡಂಗುರವ ಹೊಡೆಯಿಸಿದನು ॥ ೫ ॥ ॥ ೨೦೩ ॥

ವಾರ್ಧಿಕ.

ಭೂತಳಾಧೀಶ ಕೇಳ್ ಕೌರವನನುಜ್ಞೆಯಿಂ । ದಾತಂಗೆ ಕಾಣಿಕೆಯ ನೀಡಿದರ್ ಹಲಬರಿನ । ಜಾತನಾದಿತ್ಯ ಸಂಕಾಶದಿಂದೊಪ್ಪಿರ್ದನಲ್ಲಿಗಧಿರಥ ನಾಮದ ॥ ಸೂತನಾತ್ಮಜಗರಸುತನವಾಯಿತೆಂಬ ಸಂ । ಪ್ರೀತಿಯಿಂ ಬರೆ ಕಂಡು ಪಿತೃಭಕ್ತಿಯಿಂ ಕರ್ಣ । ನಾತಂಗೆ ಪೀಠದಿಂದಿಳಿದೆರಗಲನಿಲಜಂ ಕಂಡು ನಗುತಿಂತೆಂದನು ॥ ೧ ॥ ॥ ೨೦೪ ॥

ರಾಗ ತುಜಾವಂತು, ಮಟ್ಟೆತಾಳ.

(ಧಾಟಿ---ಕೇಳಿರೈ ಸಹೋದರಾದ್ಯರು ॥ ಎಂಬಂತೆ.)

ಕರ್ಣನಯ್ಯನನ್ನು ಕಾಣಿರೋ ॥ ಸಕಲ ಜನರು । ಕರ್ಣನ ಯ್ಯನನ್ನು ಕಾಣಿರೋ ॥ ಪಲ್ಲ ॥ ಕರ್ಣನಯ್ಯನನ್ನು ಕಂಡು । ಪುಣ್ಯ ವನ್ನು ಪಡೆಯಿರೈಯ್ಯ ॥ ಅನುಪಲ್ಲ ॥ ಕಣ್ಣ ನೋಡಿರವನ ಮಯ್ಯ । ಮಣ್ಣ ನೋಡಿರಿವನ ಮುಖದ । ಹಣ್ಣು ಮಿಾಸೆ ಸುಲಿದ ಹಲ್ಲ । ಬಣ್ಣಗಳನು ನೋಡಿರಯ್ಯ ॥ ೧ ॥ ಎಲೆಲೆ ಸೂತ ಪಿತನ ವಸ್ತು । ಸಲುವುದವನ ಸುತಗೆ ನಿನ್ನ । ತಲೆಯು ಮುಕುಟವೊಂದನಾದ । ರೊಲಿದು ನಿನ್ನ ಮಗನಿಗೀಯೋ ॥ ೨ ॥ ಮಿತ್ರನೆಂದು ನಿನ್ನ ಮಗನ । ಹೊತ್ತು ನಡೆವನಂಥನಣುಗ । ಪುತ್ರಿಯಿದ್ದರವನಿಗೊಂದ । ನಿತ್ತುಪೋ ಗು ನೆಂಟುತನಕೆ ॥ ಕರ್ಣನಯ್ಯನನ್ನು ಕಾಣಿರೋ ॥ ೩ ॥ ॥ ೨೦೭ ॥

ಕಂದಪದ್ಯ.

ಎಂದಾಭಾಸ್ಕರಸುತನಂ । ನಿಂದಿಪ ಕರಿದಶ ಸಹಸ್ರಬಲಸಂ ಯುತನಂ ॥ ಅಂಥನಣುಗನೀಕ್ಷಿಸುತಂ । ನಿಂದವನಂ ಕರೆದು ನುಡಿದನತಿ ಗರ್ವಿಸುತಂ ॥ ೧ ॥ ॥ ೨೦೮ ॥

ರಾಗ ಭೈರವಿ, ಅಷ್ಟತಾಳ.

ಎಲೆ ಭೀಮಸೇನ ಕೇಳು । ರಾಧೇಯನ । ಹಳಿದೆಯಲ್ಲಿಂದಿ ನೊಳು ॥ ತಿಳಿಯದೆ ನಿನ್ನಯ । ಬಲವಾದ ಕುಂದನು । ಗಳಹುವದೇ ಕೆಂದನು ॥ ೧ ॥ ಕುರುಡನ ಮಗನೆ ನಾನು । ವೈಧವ್ಯದ । ತರು ಣಿಯ ತನಯನೇನು ॥ ಅರಿಯಲಂಬಿಗನಿಂಗೆ । ತರಳನೆ ಹೇಳೆನ್ನ । ಕೊರತೆಯೆಲ್ಲವನೆಂದನು ॥ ೨ ॥ ಬಹುಪುತ್ರರೋರ್ವನಿಗೆ । ಪುಟ್ಟು ವದಿದು । ಬಹುಮಾನಕರ ನಿನಗೆ ॥ ಬಹುಪಿತರಿಹರಿದು । ಬಹುಮಾ ನವೆಂದೆನ್ನ । ಬಹುದೆ ಪೇಳೆನಗೆಂದನು ॥ ೩ ॥ ಮುನಿಯ ವರದಲೆನಗೆ ।

ಜನಕರೀರ್ವ । ರೆನಿಸಿದರೀಕರ್ಣಗೆ ॥ ಬಿನುಗ ಸೂತನಲಿ ಸಂ । ಜನನವಾಗುವ ಠಾವ । ಮುನಿಮಂತ್ರನಿಹುದೆಂದನು ॥ ೪ ॥ ಮುನಿಗಳು ಜನ್ಮದಲಿ । ಉತ್ತಮರೆ ಯೋ । ಜನಗಂಧಿಯೆಂಬಳಲಿ ॥ ಜನಿಸಿ ಮಹರ್ಷಿಯೆಂ । ದೆನಿಸಿದನಾವ್ಯಾಸ । ಮುನಿಯಿದಕೇನೆಂದನು ॥ ೫ ॥ ಯಾತಕಿಂತೆಂಬೆ ನೀನು । ಉತ್ತಮ ವೀರ್ಯ । ಜಾತನಾಮುನಿವರ್ಯನು ॥ ಸೂತಜನಾವ ಪು । ನೀತನ ವೀರ್ಯ ಸಂ । ಜಾತನಾಗಿಹನೆಂದನು ॥ ೬ ॥ ತನು ಬಲ ದೃಢ ಚಿತ್ತವು । ಸಾಹಸ ಶೌರ್ಯ ಘನಪರಾಕ್ರಮಗಳಿವು ॥ ಜನಪ ಲಕ್ಷಣನೀತ । ನಿನಿತು ಗುಣಾಳಿಯೊ । ಳೆನಗಿಂತ ಮಿಗಿಲೆಂದನು ॥ ೭ ॥ ಮರುಳು ಕೌರವನೆ ಕೇಳು । ನೀನೆಂಬಂತ । ಗರುವವದೇಕೆ ಹೇಳು ॥ ಸರುವ ಲಕ್ಷಣ ಹೀನ । ಧುರಕೆ ದುರ್ಬಲನಾದ । ಕಿರುಕುಳ ನೀನೆಂದನು ॥ ೮ ॥ ॥ ೨೧೬ ॥

ಭೋಗಷಟ್ಪದಿ.

(ಧಾಟಿ—ಎಲವೊ ಪಾರ್ಥ ಕೇಳು ಹಿಂದೆ ॥ ಎಂಬಂತೆ.)

ಎಲವೊ ಭೀಮ ಕೇಳೊ ಎನ್ನ । ಬಲವಿಹೀನನೆಂದೆಯದರ । ಫಲವನೀಗ ತೋರ್ಪೆ ನಿಲ್ಲು । ಕಲಹಕಂದನು ॥ ಕಲಹಕೆಂದು ಬಂದು ಮೊದಲು । ಹಲವು ಬಗೆಯೊಳೋಡಿಹೋದ । ಖಳನು ನೀನು । ಬಲ್ಲೆ ನಿನ್ನ । ಬಲವನೆಂದನು ॥ ೧ ॥ ಹಿಂದಿನಂದವಲ್ಲನೀಗ । ಸಂದ ಕಳಚಿ ಬಿಡುವೆ ನಿನ್ನ । ನೆಂದು ಬಹಳ ಸರಳನೆಚ್ಚ । ನಂದು ಕೋಪದಿ ॥ ಹಂದೆ ನಿನಗೆ ಗರುವವಿನಿತು । ಬಂದುದೇ ಪರೀಕ್ಷಿಸೆನ್ನ । ನೆಂದು ಕಿಡಿಯನುಗುಳುತೆಚ್ಚ । ನಂದು ಶರವನು ॥ ೨ ॥ ಕಡಿದು ಬರುವ ಸರಳುಗಳನು । ಕಡುಗಿ ಕೌರವೇಂದ್ರನೆಸಲು । ಝಡಿದು ಗದೆಯ ಕೊಂಡು ಭೀಮ । ಬಡಿದನರಸನ ॥ ಒಡನೆ ಗದೆಯನಾಂತು ನೃಪತಿ । ಬಿಡದೆ ಹೊಯ್ದನವನನಿಂತು । ಹಿಡಿದರವರು ಧುರವ ಕೇಳು । ಪೊಡವಿಪಾಲನೇ ॥ ೩ ॥ ॥ ೨೧೯ ॥

ಕಂದಪದ್ಯ.

ಅನಿತರೊಳಾಗುರು ಶಿಷ್ಯರ । ಮನೋಧೃತಿಯನರಿಯೆ ತನಯಗಾಜ್ಞಾಪಿಸಿರಲ್ ॥ ಅನುಪಮ ಮಾಯಾಮಂತ್ರದಿ । ಘನಘೋರಾಕೃತಿಯನೆಸಗಿ ತೋರಿದನಾತಂ ॥ ೧ ॥ ॥ ೨೨೦ ॥

ಭಾಮಿನಿ.

ಅರಸ ಕೇಳ್ಭುವನಾಳಿಯನು ಬಾ । ಯ್ದೆರೆದು ನುಂಗುವ ಮೃತ್ಯುವೋ ನರ । ಹರಿಯ ಮೂರ್ತಿಯೊ ವಿಲಯರುದ್ರನ ಭೀಕರಾಕೃತಿಯೋ ॥ ಅರಿಯಲಸದಳವಖಿಲ ಶಸ್ತ್ರವ । ಧರಿಸಿ ಮೂಜಗ ನಡುಗುವಂತ । ಬ್ಬರದೊಳೊದರುತ ಗುರುಜ ಕೃತವೈತಂದುದಾಸ್ಥಲಕೇ ॥ ೧ ॥ ॥ ೨೨೧ ॥

ರಾಗ ಘಂಟಾರವ, ಅಷ್ಟತಾಳ.

(ಧಾಟಿ---ಅಸುರೆಯೊಂದುದ ಕೇಳುತ್ತಲಪನತಿ ॥ ಎಂಬಂತೆ.)

ಬಂದು ಘರ್ಜಿಸುವಂದವ ಕಾಣುತ್ತ । ಲಂದು ಘನ ಭಯ । ದಿಂದ ಸಭೆ ಮನ । ಬಂದ ಕಡೆಗೆದ್ದೋಡಿತು ॥ ೧ ॥ ಕೌರವೇಶ್ವರ ಹಾರಿದನಲ್ಲಿಂದ । ಮಾರುತಿಯು ತಲೆ । ಗೇರೆ ಬೆರಗೆದೆ । ಯಾರಿ ಮರದಂತಾದನು ॥ ೨ ॥ ಎಲ್ಲಿಗೈದಿದ । ರಲ್ಲಿಗೈತಂದು ನಾ । ಮೆಲ್ಲದೇ ಬಿಡೆ । ನೆಲ್ಲರನು ತಡ । ವಿಲ್ಲವೆನುತಬ್ಬರಿಸಿತು ॥ ೩ ॥ ಹತ್ತು ಸಾವಿರ । ಮರ್ತ್ಯರ ಬಲಿಯಿಾವ । ಕೃತ್ಯವಿದಕೀ । ಹೊತ್ತು ನರಬಲಿ ; ಯಿತ್ತುದಿಲ್ಲಾಚಾರ್ಯನು ॥ ೪ ॥ ತಿಂದು ತೇಗುವೆ । ನಿಂದು ದ್ರೋಣನ ಬಿಡೆ । ನೆಂದು ಕುಂಭದ । ಕಂದನಿದಿರಿಗೆ । ಬಂದುದಾರ್ಭಟಗೈವುತ ॥ ೫ ॥ ಒರಲುತ್ತೈತರೆ । ಗುರು ಕಂಡು ಹೆದರಿದ । ತೆರದಿ ಶಿಷ್ಯರ । ಕರೆದು ಕೂಗುತ । ಭರದಳೋಡಿದನಾಗಲೆ ॥ ೬ ॥ ಬಿಡದೆ ದ್ರೋಣನ । ಬೆರಸಲದನು ಕಂಡು । ನಡುಗಿ ಶಿಷ್ಯರ । ಗಡಣ ಭೀತಿಯೊ ।

ಳಡಗಿತಲ್ಲಿರದೋಡುತ ॥ ೭ ॥ ವೀರ ಪಾರ್ಥನು । ಧೈರ್ಯದಿಂದಿ ದಿರಾಗಿ । ಕೂರಲಗನಾ । ಘೋರರೂಪದ । ಮೋರೆಗೆಚ್ಚನು ಖತಿ ಯೊಳು ॥ ೮ ॥ ॥ ೨೨೯ ॥

ರಾಗ ಭೈರವಿ, ಅಷ್ಟತಾಳ.

ಅರರೆ ಬಾಲಕ ಯೆನ್ನನು । ತಾಗಿದೆಯಲ್ಲ । ಮುರಿದು ಭಕ್ಷಿಪೆ ನಿನ್ನನು ॥ ತೆರಳಬೇಡೆನ್ನುತ್ತ । ಭರದಿಂದ ನರನನಾ । ವರಿಸುತ್ತಲೈ ತಂದುದು ॥ ೧ ॥ ಕೆಚ್ಚೆದೆಯುಲಿ ಪಾರ್ಥನು । ಬಾಣವನದ । ಕೆಚ್ಚು ಸರ್ವಾಂಗವನು ॥ ಮುಚ್ಚಿ ಮುಗುಳೆ ಬಿಡ । ದೆಚ್ಚನಸ್ತ್ರಂಗಳ । ನಚ್ಚರಿಯೇನೆಂಬೆನು ॥ ೨ ॥ ಆಘೋರರೂಪವಲ್ಲಿ । ಅಡಗಿಪೋಗ । ಲಾಗಿ ಸಂತೋಷದಲಿ ॥ ಆಗಲೆಲ್ಲರು ಶತ । ಯಾಗನಾತ್ಮಜನಾ ವ । ರಾಗದಿ ಪೊಗಳಿದರು ॥ ೩ ॥ ಭೇದಗೊಂಡ್ರೈದಿದರು । ಆ ಕರ್ಣ ಸು । ಯೋಧನಾದಿಗಳೆಲ್ಲರು ॥ ಮೊದದಿ ಸಿಂದು ಭೀ । ಷ್ಮಾದಿ ಸಭ್ಯರಿಗೆಂದ । ನಾಧೀರ ಕುಂಭಜನು ॥ ೪ ॥ ॥ ೨೩೩ ॥

ರಾಗ ಭೈರವಿ, ಝಂಪೆತಾಳ.

ಅರಸರಾಲಿಸಿರಿ ನಾ । ನೊರೆದಖಿಲ ವಿದ್ಯೆಗಳ । ನರಿದುಕೊಂಡವನೋರ್ವ । ನರನಲ್ಲದಿಲ್ಲ ॥ ೧ ॥ ಶಕ್ತಿಶಮದಮಧೈರ್ಯ । ಯುಕ್ತ್ಯಾದಿ ಸಕಲ ಗುಣ । ಯುಕ್ತನರ್ಜುನನೀ ಸ । ಮಸ್ತ ಶಿಷ್ಯರೊಳು ॥ ೨ ॥ ತರಳರೆಲ್ಲರ ಧೃತಿಯ । ನರಿಯೆ ಮಂತ್ರ್ನತಸಿಂದ । ಹೊರಡಿಸಿದೆನೊಂದು ಭೀ । ಕರದ ರೂಪವನು ॥ ೩ ॥ ಆರೂಪದಲಿ ಹೆದರಿ । ಹಾರಿದದು ಸಕಲ ಜನ । ಧೀರನರ್ಜುನನೋರ್ವ । ತೀರಿಸಿದನದನು ॥ ೪ ॥ ಭುವನೈಕವೀರನಹ । ನಿವನೆಂದು ಭಾವಿಸುವೆ । ನವನಿಪರೆ ನಿಮ್ಮನುವ । ನಿವರಿಸುವದೆಂದ ॥ ೫ ॥ ಸಂದೇಹವಿಲ್ಲವಿದ । ಕೆಂದು ಕೊಂಡಾಡಿದರು । ಸಿಂದು ಸಕಲರು ದ್ರೋಣ । ನೆಂದ ವಾಕ್ಯವನು ॥ ೬ ॥ ॥ ೨೩೯ ॥

ವಾರ್ಧಿಕ.

ಕ್ಷಿತಿಪಾಲ ಕೇಳ್ಬಳಿಕ | ಸಕಲ ನೃಪರಾನದಿ | ಸುತಗುರುಗಳಿಂದ ಬೀಳ್ಕೊಂಡು ನಿಜ ನಿಲಯಕಂ | ಗತಿವಿಡಿದರಿತ್ತಲಿವರೆಲ್ಲರುಂ ಸೌಖ್ಯದಿಂದಿಭಪುರಿಯೊಳಿರುತಿರ್ದರು || ಧೃತರಾಷ್ಟ್ರನರಸಿ ಭೀಮಾರ್ಜುನರ ಶೌರ್ಯವಂ | ಪ್ರತಿದಿನದೊಳಂ ನೆನದು ಮಾತ್ಸರ್ಯದಿಂದ ಕರ | ಗುತಲಿರಲ್ಕದನರಿಯದೊಂದು ದಿನಮಾಕೆಯಂ ಕಂಡು ಪೃಥೆಯಿಂತೆಂದಳು || ೧ || || ೨೪೦ ||

ರಾಗ ಆನಂದಭೈರವಿ, ಏಕತಾಳ.

(ಧಾಟಿ---ಇಂದುವದನೆ । ಅಂದಗಾರ । ಎಂಬುದರ ದ್ವಿಗುಣ ॥ ಎಂಬಂತೆ.)

ಮಾನವಂತೆಯಕ್ಕ ನಿನ್ನ | ನೂನಚಂದ್ರವದನ ಬಾಡಿ | ಹೀನ ತೇಜವಾಗಿ ತೋರ್ಪು | ದೇಸಿದೆನ್ನೊಳುಸುರಿ ಸುಬಲ | ನಂದಿನೀ | ನಳಿನ | ಗಂಧಿನೀ || ೧ || ತರಳರ್ವರಧಿಕ ಧೀರ | ಪುರುಷರೆಂಬ | ಹರುಷ ನಿನ್ನೊ | ಳಿರುವದಾದರವರೊಳಿಲ್ಲ | ನರರ ಕೊರತೆ ಹರಣ ಮಹುದೆ | ತಂಗಿಯೇ | ಕೋಮ | ಲಾಂಗಿಯೇ || ೨ || ಮಕ್ಕಳ್ವೆರುದಿಸಿ ಬೆಳೆದು | ದಕ್ಕೆ ಕರುಬಿ ದಿಂಪೆಯಂತೆ | ಸೊಕ್ಕಿಯೆನ್ನ ಕೂಡೆ ಕಾದ | ಲಿಕ್ಕೆ ಬರುವೆ ನೀನಿದೆಮಗೆ | ರೀತಿಯೇ | ನೋಡೆ | ನೀತಿಯೇ || ೩ || ದಿಂಪೆಯಲ್ಲದಿರ್ದ ದಂಡು | ಗಂಡನಲ್ಲದನ್ಯರಿಂದ | ಪುಂಡು ಹುಡುಗರನ್ನು ಪಡೆದು | ಕೊಂಡು ನೀನು ಜಗಳ ಕೆಂದು | ಬರುವೆಯಾ | ಎನ್ನ | ಜರೆವೆಯಾ || ೪ || ಮುನಿಯ ಮಂತ್ರ ಪತಿಯ ನುಡಿಯ | ನನುಸರಿಸಿದೆನಲ್ಲದಜದ | ವನಿತೆ ವಿಧವೆಯಾಗಿ ಕುರುಡ | ಮನುಜನಿಂದ ಸುತರ ಪಡೆದು | ಮೆರೆವೆನೇ | ನಿನ್ನ | ನರಿಯೆನೇ || ೫ || ಹೊಟ್ಟೆಯನ್ನ ಹೊರೆದುಕೊಂಬ | ಬಟ್ಟೆಗಾಣದಿಲ್ಲಿ ನಮ್ಮ | ಪಟ್ಟಣವನು ಸೇರ್ದ ಬಡವೆ | ಗೆಷ್ಟು ಮಾತು

ಬಾಯ ಮುಚ್ಚಿ । ಯಾಗಲೇ । ವನಕೆ । ಪೋಗಲೇ ॥ ೬ ॥ ಎನ್ನ ಕಾಂತನಾಳ್ದ ಪುರಸಿ । ದೆನ್ನದಾಯ್ತು । ನೀನೆ ನುಕ್ಕ । ಳನ್ನು ಕರೆದು ಕೊಂಡು ಗಹನ । ವನ್ನು ಶೇರಬಾರದೇನೆ । ಪೇಳವಮ್ಮ । ನುಡಿಯ । ಕೇಳವಮ್ಮ ॥ ೭ ॥ ಎಲ್ಲಾ ಭೋಗಗಳನು ನಿನ್ನ । ನಲ್ಲನೆವಗೆ ಕೊಟ್ಟು ಪೋದ । ನಲ್ಲೆ ಮಡಿದನೀಗಳಿಲ್ಲಿ । ಯುಳ್ಳಿನಂಶದೆಡೆಯ ನಿನಗೆ । ಕೊಡುವೆನೇ । ಖತಿಯ । ತಡೆವೆನೇ ॥ ೮ ॥ ॥ ೨೪೮ ॥

ಭಾಮಿನಿ.

ಎನುತ ಸುಬಲನೃಪಾಲನಂದನೆ । ಮುನಿದು ಬಾಯಿಗೆ ಬಂದ ಪರಿಯಲಿ । ವನಿತೆ ಪೃಥೆಯನು ಜ್ಞೈದಳಾ ನುಡಿಗಾಕೆಯು ತ್ತರವ ॥ ಮನದೊಳರಿಯದೆ ಪೋಗಿ ತನ್ನಯ । ಮನೆಯೊಳೊರಗಿ ದಳಳಲುತತ್ತಲು । ವಿನಯದಲಿ ಕುರು ಪಾಂಡವರಿಗಿಂತೆಂದನಾ ದ್ರೋಣ ॥ ೧ ॥ ॥ ೨೪೯ ॥

ರಾಗ ಕಾಂಭೋಧಿ, ಅಷ್ಟತಾಳ.

(ಧಾಟಿ--ಮಂತ್ರಿಗಳಿರ ಕೇಳಿರೀಗ ॥ ಎಂಬಂತೆ.)

ಅರಸು ಮಕ್ಕಳಿರ ನೀವೆಲ್ಲ । ಕೇಳಿ । ಪರಮಭಕ್ತಿಯೊಳೆಮ್ಮ ಸೊಲ್ಲ ॥ ಗುರುಗಳಾದೆಮಗಿನ್ನು । ಗುರುದಕ್ಷಿಣೆಯನಿತ್ತು । ಧರೆಯೊ ಳುತ್ತಮ ತರದ ಕೀರ್ತಿಯ । ಧರಿಸಿಕೊಂಡರೆ ಹರುಷಮಪ್ಪುದು ॥ ॥ ೧ ॥ ಪೃಥ್ವಿಗುತ್ತಮ ಗಂಗಾನದಿಯ । ಉತ್ತರಸ್ಥ ಪಾಂಚಾಲಭೂಪ ತಿಯ ॥ ಶಕ್ತಿಯೊಳ್ಗೆಲಿದತಿ । ಯುಕ್ತಿಯಿಂ ಸೆರೆವಿಡಿ । ದಿತ್ತ ತಂದೆನು । ಗಿತ್ತರದು ಬಹು । ವಿತ್ತ ದಕ್ಷಿಣೆಗುತ್ತಮೋತ್ತಮ ॥ ೨ ॥ ಇದರ ಕಾರ ಣವೆಲ್ಲ ನಿಮಗೆ । ಆತ । ನಿದಿರೆನ್ನೊಳಿರಿವುದು ನಮಗೆ ॥ ಮದಮುಖಿ ನನು ತಂದು । ವೊದಲು ನೀವೀವುದೆಂ । ದುದನು ಕೇಳುತ । ಮುದದಿ ಕೌರವ । ಪದುಮನಖಿಸುತ । ರೊಡಗಿ ಪೇಳ್ದರು ॥ ೩ ॥ ॥ ೨೫೦ ॥

ರಾಗ ತೋಡಿ, ಏಕತಾಳ.

(ಧಾಟಿ--ಮರುಳು ದ್ವಾರಪಾಲಕರಿರ ॥ ಎಂಬಂತೆ.)

ಗುರುಗಳೆ ದುರಂತ ಕಾರ್ಯ । ದಿರವ ಪೇಳ್ವ ತರದಿ ॥ ಒರೆವು ತಿರುವಿರೀಗಲದನು । ಪರಿಕಿಸಲ್ಕೆ ಮನದಿ ॥ ಕಿರಿದಿನೊಳಗೆ ಕಿರಿದು ನಿಮ್ಮ । ಕರುಣದಿಂದಿದೆಮಗೆ ॥ ಭರದೊಳವನ ತಂದು ಪಾದ । ಕೆರ ಗಿಸುವೆವು ನಿಮಗೆ ॥ ೧ ॥ ಚಳಕದಿಂದ ನೇಮವಿತ್ತು । ಕಳುಹಿರೆಮ್ಮ ನೆನುತಾ ॥ ಕಲಶಜಾತನಮಲ ಪಾದ । ಗಳಿಗೆ ನಮಿಸಲಾತ ॥ ಬಲ ಸಮೇತ ಪೋಗಿರೆಂದು । ಸಲಿಸಲಪ್ಪಣೆಯನು ॥ ತಳುವದವರು ಕೂಡಿಸಿದರು । ಕೆಲವು ಸೇನೆಗಳನು ॥ ೨ ॥ ಶರ ಧನುಸ್ಸು ಖಡು ಗ ಮುಂತಾ । ಗಿರುವ ಕೈದುಗಳನು ॥ ಧರಿಸಿ ಛತ್ರ ಚಾಮ ರಾದಿ । ಸರುವ ಬಿರಿದುಗಳನು ॥ ಧರಿಸಿ ವಾದ್ಯಘೋಷದಿಂದ । ಪೊರಟು ಹೋದರಾಗ ॥ ತರಣಿಜಾತ ಕೌರವಾದಿ । ದುರುಳರೆಲ್ಲ ಬೇಗ ॥ ೩ ॥ ॥ ೨೫೫ ॥

ರಾಗ ನೀಲಾಂಬರಿ, ಏಕತಾಳ.

(ಧಾಟಿ--ಲಲನೆ ಕೇಳೆಲೆ ನಿನ್ನ ದಣಿಸಿದ ಖೂಳರು ॥ ಎಂಬಂತೆ.)

ಬಳಿಕ ಪಾಂಡವರು ನಿ । ರ್ಮಲಮತಿ ದ್ರೋಣಗೆ । ತಲೆವಾಗಿ ತಮ್ಮನಿಂ । ದುಳಿದು ಕೌರವರು ॥ ಘಳಿಲನೈದಿದರಿನ್ನು । ಕೆಲಸ ವೇನೆಮಗೆಂದು । ತಿಳುಹಿರೆಂದೆನೆ ಕೇಳಿ । ಕಲಶಜ ನುಡಿದ ॥ ೧ ॥ ಎನಗೆ ಸಮಾನನಾ । ಜನಪನಾತಗೆ ಸೋತು । ಮನೆಗೋಡಿ ಬಂದ ಪರಿನಜಕೌರವರು ॥ ಇನಿತಿರುವುದರಿಂದ । ಲನುವರಕನುಜರ । ನನುಸರಿಸುವದು ಸೇ । ವೆನುತ ನೇಮಿಸಿದ ॥ ೨ ॥ ಗುರುರಾಯನಾ ಜ್ಞೆಯ । ಧರಿಸಿ ಪಾಂಡವರವ್ವೆ । ಗೆರಗಲೋಸುಗ ಪೋಗಿ । ತರ ಳಾಕ್ಷಿ ಪೃಥೆಯ ॥ ಇರವನೆಲ್ಲವ ಕಂಡು । ಬೆರಗಾಗುತ್ತವಳನ್ನು । ಕರೆದು ನುಡಿಸಿದರು । ಪರಿಪರಿಯಿಂದ ॥ ೩ ॥ ॥ ೨೫೬ ॥

ರಾಗ ಶಂಕರಾಭರಣ, ಅಷ್ಟತಾಳ.

(ಧಾಟಿ—ಕರ್ಣಜಾತ ಕೇಳೋ ಮಾತ ॥ ಎಂಬಂತೆ.)

ಮಾತೆ ಲಾಲಿಸೆಮ್ಮ ಮಾತ । ನೇತ್ರಕಿಂತು ಮೌನದಿಂದ । ಧಾತ್ರಿಯಲ್ಲಿ ಮಲಗಿಕೊಂಡ । ರೀತಿಯೇನಿದು ॥ ಸೀತಿವಂತೆಯೆದ್ದು ಕುಳಿತು । ಪ್ರೀತಿಯಿಂದಲೆಮ್ಮೊಳೀಗ । ಮಾತನಾಡೆನುತ್ತ ಧರ್ಮ । ಜಾತ ಪೇಳ್ದನು ॥ ೧ ॥ ಆವ ವಸ್ತುವನ್ನು ಬಯಸಿ । ಈವಿಶೇಷ ದುಃಖದಿಂದ । ನೋವನಾಂತೆಯೆಂಬುದುಸುರು । ಸಾವಧಾನದಿ ॥ ಆವ ಜಗದೊಳಿರ್ದರದನು । ನಾವು ತರುವೆವೆಂದು ಶೌರ್ಯ । ಭಾವ ವಿಡಿದು ನಕುಲ ಸಹ । ದೇವರೊರೆದರು ॥ ೨ ॥ ಇಷ್ಟು ಚಿಂತೆ ನಿನ ಗಾದಾವ । ದುಷ್ಟರಿಂದ ಬಂದುದಿಂದು । ಕುಟ್ಟಿ ಕೊಲುವೆನವರ ಪ್ರೀತಿ । ಯಿಟ್ಟು ಪೇಳ್ವರೇ ॥ ಅಷ್ಟಲೋಕಪಾಲರಡ್ಡ । ಗಟ್ಟಬಂದ ರವರ ಪುರವ । ಸುಟ್ಟುಬಿಡುವೆನೆಂದು ನುಡಿದ । ದಿಟ್ಟ ಪಾರ್ಥನು ॥ ॥ ೩ ॥ ಕುರುಡನೇನನೆಂದನವನ । ತರುಣಿ ತನಯರೇನಗೈದ । ರರುಹು ಶೀಘ್ರದಿಂದಲವರ । ಕರುಳ ಬಗೆವೆನು ॥ ಹರನು ಬಂದು ತಡೆದರವನ । ಪುರವ ಸೂರೆಗೊಂಬೆನೆಂದು । ಮರುತಜಾತನುಸುರೆ ಕುಂತಿ । ಮರುಗುತೆಂದಳು ॥ ೪ ॥ ॥ ೨೬೨ ॥

ರಾಗ ನೀಲಾಂಬರಿ, ರೂಪಕತಾಳ.

(ಧಾಟಿ—ಯಾತಕೆ ಮಲಗಿದೆ ರಥದಲಿ ॥ ಎಂಬಂತೆ.)

ಎಂತುಸುರುವೆನಕಟನ್ನಯ । ಚಿಂತೆಯನೆಲೆ ಬಾಲರೆ ಜ । ನ್ಮಾಂತರದಘ ಪರಿಣಾಮದ । ಲಿಂತೊದಗಿದುದೆನಗೆ ॥ ಕಾಂತೆಯ ರೊಳು ಜಗದೊಳಗೆ । ನ್ನಂಥವಳನು ಕಾಣೆನು ಬಲು । ಸಂತೋಷ ವದಾಯಿತೆ ಭಗ । ವಂತನ ಮಾನಸಕೆ ॥ ೧ ॥ ಮೊದಲಲಿ ಸುತರಿ ಲ್ಲದೆ ಮರು । ಗಿದೆ ನಾ ಮೇಲಿನಯನು ಸುರ । ಪದವಿಗೆ ಪೋಗಲು

ಕರಗಿದೆ । ಬದುಕಿದೆ ನಿಮಗಾಗಿ ॥ ತದನಂತರವಿಲ್ಲಿಗೆ ಬಂ । ದೊದಗಿದೆನಡವಿಯನಗಲಿದು । ನದಿಯಣುಗನ ದಯದಿಂದಲಿ । ಪದುಳದೊಳಿಹೆವೆಂದು ॥ ೨ ॥ ಪರದೇಶಿಗಳಂತೀಪುರ । ವರದಲಿ ಬಾಳುವದಾಯಿತು । ತರಳರೆ ನಿಮ್ಮಯ್ಯನು ಬದು । ಕಿರುತಿದ್ದರೆ ನಮಗೆ॥ ಬರುವದೆ ಈ ಗತಿಯಾತನ । ಮರಣದ ದೆಸೆಯಿಂದಗಣಿತ । ಪರಿಭವವನು ಪಡವುತಲಿಹ । ಪರಿಯಾಯಿತು ಶಿವನೆ ॥ ೩ ॥ ಅಂದೇಯಿಾಧರೆಯೆಲ್ಲವ । ನಂಧನಿಗೊಪ್ಪಿಸಿ ಪಾಂಡು ಮ । ಹೀಂದ್ರನು ವನಕೈದಿದನದ । ರಿಂದೀನಗರದಲಿ ॥ ಒಂದಧಿಕಾರವು ನಮಗಿ । ಲ್ಲೆಂದಬ್ಬರಿಸಿದಳೆನ್ನನು । ಗಾಂಧಾರಿಯು । ಮುಂದೇಗುವೆ । ನೆಂದಳಲಿದಳವಳು ॥ ೪ ॥ ॥ ೨೬೬ ॥

ಕಂದಪದ್ಯ.

ಪಡೆದವಳಳಲಂ ಕೇಳುತ । ಕಡೆಗಾಲದ ರುದ್ರನಂತೆ ಕಿಡಿಗೆದರುತ್ತಂ ॥ ತಡೆಯದೆ ಭೀಮಾದ್ಯಣುಗರ್ । ಹೊಡೆವುತ ನಿಜಭುಜವನವ್ಹೆಗೆಂದರ್ಜವದಿಂ ॥ ೧ ॥ ॥ ೨೬೭ ॥

ರಾಗ ಸಾರನಿ, ಏಕತಾಳ.

ಮಾತೆಯೆ ಮರುಗುವೆ । ಯೇತಕೆ ಬಿಡುಬಿಡು । ಭೀತಿಯನುರೆ ತೊರೆದು ॥ ಭೂತಳವಾಳ್ವೆವು । ರೀತಿಯೊಳಾಕಡು । ಧೂರ್ತರ ಸದೆಬಡಿದು ॥ ೧ ॥ ಭುಜಬಲವೇ ಭೂ । ಭುಜಕುಲದಧಿಕೃತಿ । ನಿಜವಿದು ತಿಳಿ ನೀನು ॥ ಅಜ ಪಿತೃ ಪದಪಂ । ಕಜ ಕೃಪೆಯಿರುತಿರೆ । ಕುಜನರ ಭಯವೇನು ॥ ೨॥ ನಾರಿಯುಸುರ್ದ ವಿ । ಚಾರದ ನುಡಿಯದು । ಕಾರಿಯಕಹುದೆಂದು ॥ ತೋರದು ಶೋಕವ । ನ್ವೈರಿಪುದೆಂದನು । ವೀರ ಯಮಜ ಮಣಿದು ॥ ೩ ॥ ॥ ೨೭೦ ॥

ವಾರ್ಧಿಕ.

ಇಂದುಕುಲಜಾತ ಕೇ | ಳಂದದಿಂದಾಪಾಂಡು | ನಂದನಬಗ ಹಳ ಬಗೆ | ಯಿಂದವಳ ಶೋಕಸಂ | ಬಂಧಮಂ ಬಿಡಿಸಲಾ | ನಂದಮಂ ತಾಳುತರ | ವಿಂದಮುಖಿ ಕುಂತಿ ಬಳಿಕ || ಕಂದರಂ ಪಿಡಿದೆತ್ತಿ | ಯೆಂದಿನಂತುಚಿತೋಕ್ತಿ | ಯಿಂದ ಮನ್ನಿಸುತಲಿರ | ಲಂದು ಕೌಂತೇಯರಭಿ | ವಂದಿಸುತ ಮುಗುಳಲ್ಲಿ | ನಿಂದು ಸಂಭ್ರಮದೊಳಿಂ | ತೆಂದರಾ ನಿಜಮಾತೆಗೆ || ೧ || || ೨೭೧ ||

ರಾಗ ಕೇತಾರಗೌಳ, ಅಷ್ಟತಾಳ.

ಜನನಿ ಲಾಲಿಸು ಕುಂಭ | ತನುಜನಾಜ್ಞೆಯೊಳಿಂದು | ಜನಪ ದ್ರುಪದನಲ್ಲಿಗೆ || ಅನುವರಕ್ಕೈದುವೆ | ವನುಜರೈದಿದರು ಮುಂ | ದನುಮತಿಗೊಡು ನಮಗೆ || ೧ || ಬೆಚ್ಚಿ ದಳಂಗನೆ | ಯುಚ್ಚರಿಯುಕಟನಿ | ಮ್ಮಿಚ್ಛೆಯೇಕಿಂದಿನೊಳು || ಹೆಚ್ಚಿನ ಭಟನೊಡ | ನೆಚ್ಚಾಡುವದನವ | ನುಚ್ಚರಿಸಿದನೆಂದಳು || ೨ || ಕಾರಣವೆಲ್ಲವು | ತೋರುವದಂತ್ಯದಿ | ಧಾರುಣೀಶನ ಪಿಡಿದು || ಘೋರನೆ ತಹುದೆಂದು | ವೀರನೇಮಿಸಿದನು | ವಿಾರುವದಲ್ಲವಿದು || ೩ || ಭಾರಿಯ ಭಟನತಿ | ಧೀರ ದ್ರುಪದನ ವಿ | ಚಾರವ ಬಲ್ಲೆನಿಂದು || ಆರಣದಲಿ ಭಯ | ತೋರುವದೆನಗೆಂದು | ನಾರಿ ಚಿಂತಿಸಿದಳಂದು || ೪ || ಎಂಥ ಪರಾಕ್ರಮ | ವಂತನಾದರು ಸಮ | ರಾಂತದೊಳವನ ತಂದು || ಸಂತಸದಲಿ ಗುರು | ವಂತಿಕಕೊಪ್ಪಿಸು | ವಂಥಪರಾಹೆನಿಂದು || ೫ || ಧರವಿದ್ಯೆಯೆಲ್ಲವನರಿವವರಾದರು | ತರಳರು ನೀವಲ್ಲಿಗೆ || ತೆರಳಿದೊಡಾವಂಗ | ದೊರೆವುದೊ ಎಂದೆಂಬ | ಕೊರತೆಯುಪ್ಪುದು ತನಗೆ || || ೬ || ಹರಿಹರರಂಘ್ರಿಯ | ಕರುಣದೊಳನ್ಯರ | ಗರುವವ ಮುರಿವೆವಿಂದು || ಗುರುವಾಜ್ಞೆಯೆಮಗಿದೆ | ತೆರಳದೆ ಬಿಡೆವೆಮ್ಮ | ಪರಸಿ ಕಳುಹಿಸೆಂದರು || ೭ || ನಳಿನದಳಾಕ್ಷನು | ಸಲಹಲಿ ನಿಮ್ಮನು |

ಬಲವಂತ ನೃಪನನಿಂದು ‖ ಗೆಲಿದು ತಂದೀಗುರು | ಗಳಿಗಿತ್ತು ಬನ್ನಿ ರೆಂ | ದೊಲಿದು ಪೇಳಿದಳು ನಿಂದು ‖ ೮ ‖ ‖ ೨೭ ‖

ರಾಗ ಭೈರವಿ, ತ್ರಿಪುಟತಾಳ.

(ಧಾಟಿ---ಬರುತ ಭೀಷ್ಮ ದ್ರೋಣ ಕೃಪರಿಗೆ ॥ ಎಂಬಂತೆ.)

ಅರಸ ಕೇಳ್ಳೈ ಬಳಿಕ ಭಕ್ತಿಯೊ | ಳೆರಗಿ ಪಾಂಡವರಪ್ಪೆಗಾ ಕೆಯು | ಚರಣಧೂಳಿಯನಾಂತು ಶಿರದಲಿ | ಭರದೊಳಾಚತುರಂಗ ಬಲವನು | ಕರೆಸಿ ಮುಸಲ ಮುಸುಂಡಿ ಘನತೋ | ಮರ ಕುಠಾರ ಗದಾದಿಯಾಯುಧ | ಶರನಿಷಂಗ ಧನುಸ್ಸುಗಳು ತಾಂ | ಬಿರುವ ಬಹು ಭಂಡಿಗಳ ಬರಿಸಿದ | ರೇನನೆಂಬೆ | ನಾನಿ | ನ್ನೇನನೆಂಬೆ ‖ ೧ ‖ ಭೇರಿ ತಂಬಟ ಕೊಂಬು ಕಹಳೆ ನ । ಗಾರಿ ಮೊಳಗಿತು ಛತ್ರಚಾ ಮರ । ದೋರಣದ ಬಹು ಬಿರಿದುಗಳ ಶೃಂ । ಗಾರವೆಸೆದುದು ಜಯ ಜಯಧ್ವನಿ । ದೋರಿ ಪೊಗಳುವ ಪಾಠಕರ ಬಲ । ದಾರುಭಟೆಯಲಿ ಪಾಂಡವರು ಪೊಂ । ದೇರನಡರಿದು ಧನುವನೊದರಿಸಿ । ವೀರ ದ್ರುಪ ದನ ಪುರಿಗೆ ನಡೆದರ । ದೇನನೆಂಬೆ । ನಾನಿ । ನ್ನೇನನೆಂಬೆ ॥ ೨ ॥ ಕೌರವರ ಬಲ ಮುಂದೆ ಪೋಗುವ । ದಾರಿಯಲಿ ದುಃಶಕುನ ಮೊದ ಗಿದು । ದೋರಣದೊಳದನೆಣಿಕಗೊಳದು । ಬ್ಬೇರಿ ದ್ರುಪದನ ಪುರವ ಮುಸುಕಿತು । ಧೀರ ಪಾಂಡವರವರ ಪರಿಯನು । ದೂರದಲಿ ನೋಡುತ್ತ ನಿಂದರು । ಶೂರ ಕರ್ಣಾದಿಗಳನಲ್ಲಿಯು । ದ್ವಾರಪಾಲರು ತಡೆದರಾಗಲೆ । ಏನನೆಂಬೆ । ನಾನಿ । ನ್ನೇನನೆಂಬೆ ॥ ೩ ॥ ॥ ೨೮೨ ॥

ರಾಗ ಕೇತಾರಗೌಳ, ಅಷ್ಟತಾಳ.

(ಧಾಟಿ---ಅಂಕೆಯು ನಡೆಯದು ॥ ಎಂಬಂತೆ.)

ಯಿಲ್ಲಿ ಬಾಲಕರೆ ನೀ । ವೆಲ್ಲಿಗೆ ಪೋಗುವಿ । ರಿಲ್ಲಾವು ದುಂಟು ಕಾರಿಯವೆಂದು । ಯಿಲ್ಲವ ನಾವ್ಕೇಳಿಕೊಳ್ಳದೆ ನಿಮ್ಮಯ ।

ಗುಲ್ಲಿಗೆ ದಾರಿಯು ಬಿಡೆವಿಂದು ‖ ೧ ‖ ಮಂಕುಗಳಿರ ನಿಮ್ಮ । ಬಿಂಕದ ಮಾತಿಗೆ । ಶಂಕಿಸಿಕೊಂಡು ಪೋಗೆವು ನಿಮ್ಮ । ಟೊಂಕವ ಮುರಿದು ನ । ಮ್ಮಂಕವ ತೋರ್ಪೆವು । ಕೊಂಕುಮಾತಲ್ಲದು ಬಿಡಿರೆಮ್ಮ ‖ ೨ ‖ ಪುಂಡ ಬಾಲರೆ ಕೈಯು । ದಂಡದಿ ನಿಮ್ಮಯು । ಮುಂಡೆಮುಂಡೆಯು ಮೇಲೆ ಬಡಿವೆವು ‖ ಚಂಡತನದೊಳೆಮ್ಮ । ನಂಡಲದರೆ ನಿಮ್ಮ । ತಂಡತಂಡವನೆಲ್ಲ ಕಡಿವೆವು ‖ ೩ ‖ ಕರಳಿ ಕರ್ಣಾದ್ಯರು । ಭರದೊಳವರ ಕೈಯು । ಮುರಿಮುರಿ ಬಿಗಿದು ನೀವೀಗಲೇ ‖ ಧೊರೆಯನ್ನು ಕರೆಯಿರಿ । ಘೋರಕೆಂದು ನಾಗಿಗೆ । ಬರೆವರು ಪುಣ್ಣ್ಯವನಾಗಲೇ ‖ ೪ ‖ ‖ ೨೮೬ ‖

ಕಂದಪದ್ಯ.

ಕರಿಪುರದಧಿಪತಿ ಕೇಳತಿ । ಭರದಿಂದಾದ್ರೂಪದಾಲಿಪ್ರೆ ತಂದವಳತಂ ‖ ವೇರಿಪಾ ಮಂತ್ರಿಜನಾಳಿಯು । ಕಿರಿಯುಂದಿತು ದ್ರುಪದರಾಜಗೆರಗುತ ನುಡಿದರ್ ‖ ೧ ‖ ‖ ೨೮೭ ‖

ರಾಗ ಮುಖಾರಿ, ಏಕತಾಳ.

(ಧಾಟಿ---ಮಹಾರಾಜಾ ಕೇಳ್ಪುದು ಕಲಾಪ ‖ ಎಂಬಂತೆ.)

ಭೂಮಿಪಾಲಕನೆ ಲಾಲಿಸ್ಸೆಯು । ನಾವೆಂಬ ನುಡಿಯು । ಭೂಮಿಪಾಲಕನೆ ಲಾಲಿಸ್ಸೆಯು ‖ ಪಲ್ಲ ‖ ಪೇಳೆ ಭೀತಿಯುಹುದು ನಮಗೆ । ಖೂಳತನದೊಳೆಮ್ಮ ಪುರಿಗೆ । ಕಾಳಗಕರಿಗಳ । ಪಾಳಯು ಬಂದೆ । ಮ್ಮಾಳುಗಳೆಲ್ಲವ । ಗೋಳುಗುಡಿಸಿದುದು ‖ ೧ ‖ ಎತ್ತಲೀಕ್ಷಿಸಿದರು ಪುರದ । ಸುತ್ತಲವರ ಬಲದಬ್ಬರದ । ಮುತ್ತಿಗೆಯುಧಮರ । ಕೃತ್ಯಾದಿತನು ನಡು । ಗುತ್ತಿದೆ ನಗರಿಯು । ಕಿತ್ತಪರೀದಿನ ‖ ೨ ‖ ತಡೆದು ಹೊಯ್ದಾಡಿದರೆ ನಮ್ಮ । ಹಿಡಿದು ಕೈಯು ಕಟ್ಟಿ ನಿಮ್ಮ । ಒಡೆಯನ ಕರೆಯಿರಿ । ತಡೆಯದೆ ರಣಕೆನು । ತೊಡನೊಡನೆಮ್ಮನು । ದಡಿಗರು ಹೊಡೆದರು ‖ ೩ ‖ ‖ ೨೮೮ ‖

ರಾಗ ಸೌರಾಷ್ಟ್ರ, ತ್ರಿಪುಟತಾಳ.

ದ್ವಾರಪಾಲರ ನುಡಿಯ ಕೇಳುತ | ವೀರ ದ್ರುಪದನು ಖಾತಿಯಿಂದು | ಭ್ಬೇರಿ ನುಡಿದನು ಮಂತ್ರಿಮುಖ ಪರಿ | ವಾರಗಳಿಗೆ || ೧ || ಏನಿದಚ್ಚರಿಯಮಮ ಮನದನು | ಮಾನವಿಲ್ಲದೆಯೆಮ್ಮ ಪುರಕರಿ | ಸೇನೆ ಮುಸುಕಿದ ಪರಿಯನರಿಯೆ ನ | ವೀನವಿಂದು || ೨ || ಸಕಲ ದೇಶಾಧೀಶರೆನ್ನಯ | ವಿಕಟಭುಜಬಲಕಂಜಿಕೊಂಡೇ | ಸುಖದೊಳಿರುತಿಹರಲ್ಲದಿಂತೀ | ಮುಖದಿ ಬಹರೆ || ೩ || ಕರಿಪುರದ ಭೂಮಿಪರು ಬಲವಂ | ತರು ವಿಚಾರಿಸಲಾದರಕ್ರಮ | ಚರಿತರಲ್ಲೈ ಬಂದರಾರೋ | ದುರುಳ ನೃಪರು || ೪ || ಖಳರ ತಲೆಗಳ ಕಡಿದು ಭೂತಾ | ವಳಿಗೆ ಬಲಿಗೊಟ್ಟಂಜಿದವರನು | ನಿಳಯ ಪರಿಯಂತಟ್ಟುವದೆ ಘನ | ತಿಳಿಯಲೆಮಗೆ || ೫ || ಇವಕೆ ಪೋಗುವ ಧಿಟ್ಟರೀಸ್ತೈ | ನ್ಯದೊಳದಾರವರೆನ್ನ ವೀಳಯ | ವಿದನು ಪಿಡಿದ್ಯೈದಲಿಯೆನುತ್ತವ | ನೊದಗಿ ನುಡಿದ || ೬ || || ೨೯೬ ||

ಕಂದಪದ್ಯ.

ಧರಣಿಪನೆಂದುದನಾಲಿಸಿ | ಭರದಿಂತತ್ತನುಜ ಸತ್ಯಜಿತು ಮಂತ್ರೀಶರ್ || ಶರ ಧನು ತೂಣೀರಗಳಂ | ಧರಿಸುತ ಪಾರ್ಷತನರೇಂದ್ರಗೆರಗುತ ನುಡಿದರ್ || ೧ || || ೨೯೭ ||

ರಾಗ ಮಾರವಿ, ಏಕತಾಳ.

ಅವನಿಪ ಕೇಳೀ | ಬವರವದೇಂಘನ | ಕವಿದರಿವಿಳರವನು || ರವಿಜನ ಪುರಿಗ | ಟ್ಟುವೆವತಿಬೇಗದಿ | ವಿವರಿಸಲೇನದನು || ೧ || ಭಾರ್ಗವ ತಡೆಯಲಿ | ಭರ್ಗನೆ ಬರಲಿ ಮ | ಹೋಗ್ರದೊಳಹಿತರನು || ನಿಗ್ರಹಿಸುವೆವು ರ | ಣಾಗ್ರದೊಳೀಕ್ಷಿಸು | ವಿಗ್ರಹವಂದವನು || ೨ || ಕೊಡು ವೀಳಯವನು | ತಡೆಯದೆ ಸೇನೆನೆ |

ಪೊಡವಿಪನದನೊಲಿದು ॥ ನಡೆಯಿರಿ ಬಹುಬಲ । ದೊಡನೆನುತವರಿಗೆ। ನುಡಿದಿತ್ತನು ತಿಳಿದು ॥ ೩ ॥ ಒದಗಿದ ಚತುರಂ। ಗದ ಬಲ ಸಹಿತವ । ರೊದರುತ ಗರ್ಜಿಸುತ ॥ ಮದಮುಖಿ ಕೌರವ । ರಿದಿರಿಗೆ ನಡೆದರು । ವಿಧವಿಧ ಶರವೆಸುತಾ ॥ ೪ ॥ ॥ ೩೦೧ ॥

ವಾರ್ಧಿಕ.

ಅರಸ ಕೇಳವರ ಬಾಣಾವಳಿಯು ಹಾವಳಿಯು । ಲಿರದೆ ಕೌರವ ಬಲಂ ಭೀತಿಯಿಂ ರೀತಿಯಿಂ । ಧುರದೊಳ್ಪಲಾಯನಂ ಗೈವುದಂ ಸುಯ್ಯುದಂ ಪರಸೈನ್ಯದುರವಣೆಯನು ॥ ತರಣಿಜಂ ಕಂಡು ಘನ ಕೋಪದಿಂ ಚಾಪದಿಂ । ಸರಳನೆಸುತಹಿತಭಟಸೇನೆಗಳನಾನೆಗಳ । ನರಿವುತ್ತೈತರೆ ಕಂಡ ಶಂಕದಿಂ ಬಿಂಕದಿಂ ಮಂತ್ರೀಶನಿಂತೆಂದನು ॥ ೧ ॥ ॥ ೩೦೨ ॥

ರಾಗ ಶಂಕರಾಭರಣ, ಮಟ್ಟಿತಾಳ.

(ಧಾಟಿ—ನರನು ಗಾಂಡೀವ ಧನುವ ಝೇಂಕರಿಸುತ । ಎಂಬಂತೆ.)

ದುರುಳ ನೃಪಕುಮಾರ ನೀನದಾವ ಸುಭಟನು । ಬರಿದೆ ಕೆಣಕಲೇತಕೆಮ್ಮನುಸುರು ನಿಜವನು ॥ ಅರಸ ದ್ರುಪದನಿಂಗೆ ನಾನು ಮಂತ್ರಿಯೆನ್ನನು । ಅರಿತುಕೊಳ್ಳೆನುತ್ತಲೆಸಲು ಕರ್ಣ ನುಡಿದನು ॥ ೧ ॥ ಸೃಷ್ಟಿಗುತ್ತಮಾಂಗದೇಶದರಸನೆನ್ನನು । ಧಿಟ್ಟ ಕರ್ಣನೆಂಬರೆಲ್ಲರೀಗ ನಿಮ್ಮನು ॥ ಕುಟ್ಟಿ ಕೊಂದು ಕೆಡಹಿ ಬಳಿಕ। ದ್ರುಪದ ನೃಪನನು । ಕಟ್ಟಿಕೊಂಡು ಪೋಗಬಂದೆವೆನುತಲೆಚ್ಚನು ॥ ॥ ೨ ॥ ಧಾರುಣೀಶನನ್ನು ಪಿಡಿವ ಶೂರತನವನು । ತೋರಿಸೆನುತ ಮಂತ್ರಿಯೆಸಲು ಭೂರಿ ಶರವನು ॥ ತೀರು ಮುರಿಯಲಂಜಿ ಹಿಂದೆ। ಸರಿಯೆ ಕರ್ಣನು । ಕೌರವೇಂದ್ರನಾಂತು ನಿಂದು ಮಂತ್ರಿಗೆಂದನು ॥ ೩ ॥ ॥ ೩೦೩ ॥

ರಾಗ ತೋಡಿ, ಅಷ್ಟತಾಳ.

(ಧಾಟಿ—ಚರರೆಂದ ನುಡಿಗೇಳುತ್ತ ॥ ಎಂಬಂತೆ.)

ಎಲವೊ ಮಂತ್ರಿಯೆ ನೀ ಕೇಳು । ನಮ್ಮವನನ್ನು । ಗೆಲಿದೆನೆಂದಾತ್ಮದೊಳು ॥ ತಳೆದ ಗರ್ವವನೀಗ । ನಿಲಿಸುವೆ ನೋಡಿನ್ನು । ಬಲವಂತ ಕೌರವನಳವನೆಂದೆಚ್ಚನು ॥ ೧ ॥ ಕುರುಡನ ಮಗನೆ ನೀನು । ಯುದ್ಧದಿ ನೀನು । ಬರಡನೆಂದೆನಿಸುವೆನು ॥ ತೆರಳಬೇಡೆಂದು ನಿ । ಷ್ಠುರ ಮರ್ಮಭೇದಿಯ । ಶರವೊಂದನೆಳೆದೆಚ್ಚ । ನರಸಗೆ ಮಂತ್ರಿಯು ॥ ೨ ॥ ಆ ಧೀರನೆಸುಗೆಯೊಳು । ಕೌರವ ನೊಂದು । ಮೇದಿನಿಯೊಳು ಬೀಳಲು ॥ ಖೇದದಿಂದಾತನ । ಸೋದರರೆಲ್ಲರು । ಕಾದಿ ಮಂತ್ರಿಯೊಳು ಹಿಂ । ದಾದರೇನೆಂಬೆನು ॥ ೩ ॥ ಕೌರವ ಕರ್ಣನಿಗೆ । ಪೇಳ್ದನು ಗ್ರಹ । ಚಾರದುರ್ಬಲವೆಮಗೆ ॥ ಸೇರದು ಜಯವು ನ । ಮ್ಮೊರಿಗೈದುವ ಯೆನ । ಲೋರಂತೆ ಸಕಲರು । ಹಾರಿದರಲ್ಲಿಂದ ॥ ೪ ॥ ಎಲ್ಲಿಗೈದುವಿರಿ ನೀವು । ದುಷ್ಟರೆ ನಿಮ್ಮ । ಕೊಲ್ಲದೆ ಬಿಡೆವು ನಾವು ॥ ನಿಲ್ಲಿರೆನ್ನುತ ಕೋಪ । ದಲ್ಲಿ ಸಚಿವ ಮುಖ್ಯ । ರೆಲ್ಲರು ಬೆರಸಿದ । ರಲ್ಲಿಂದಾದುರುಳರ ॥ ೫ ॥ ಕೆಲರು ತರುವನೇರ್ದರು । ಕೌರವರೊಳು । ಕೆಲರು ಘಾತಕೆ ಬಿದ್ದರು ॥ ಹಳುವವ ಹೊಕ್ಕರು । ಕೆಲರು ಸರೋವರ । ತಿಳಿದರು ಭೀತಿಯ । ತಳೆದು ಗಾಬರಿಯಾಗಿ ॥ ೬ ॥ ॥ ೩೧೧ ॥

ವಾರ್ಧಿಕ.

ಅರಸ ಕೇಳಿಂತವರ್ಬೀಳುತೇಳುತ ಜರದ । ಕರಚರಣಜಾನುಗಳ ಕಳಚಿದ ಕಿರೀಟಗಳ । ಶಿರಗಳ ವಿನಷ್ಟರಾಜಾಂಗಮರ್ಯಾದೆಗಳ ನಾಚಿಕೆಯ ಸೋವಿನಿಂದ ॥ ಶಿರದ ಮುಸುಕಿಂದ ಬರಲಂಗನೆಯರಿದಿರಾಗಿ । ಧುರವಿಜಯದಾರತಿಯ ನೆತ್ತುತಿರಲದನು ಧಿ । ಕ್ಕರಿಸಿ ಲಜ್ಜಾಭರದೊಳಿನಜ ಕೌರವರೆಲ್ಲರೈದಿದರ್ತಮ್ಮ ಮನೆಗೆ ॥ ೧ ॥ ॥ ೩೧೨ ॥

ಭಾಮಿನಿ.

ಅತ್ತ ಸಚಿವಾದಿಗಳು ಬೆರಬೆರ | ಸುತ್ತ ಬರೆಬರೆ ಕಾಣದಾರನು | ಪತ್ತನಕೆ ತಿರುಗುತ್ತ ದಾರಿಯ ಮೇಲೆ ಪಾಂಡವರು ॥ ನಿತ್ಯದನು ಕಂಡಿವರು ರಿಪುಗಳೆ | ನುತ್ತ ಬಾಣವನೆಸಲು ಹೂಂಕರಿ | ಸುತ್ತ ಕಿಡಿಕಿಡಿಯಾಗಿ ನುಡಿದರು ಭೀಮ ಫಲ್ಗುನರು ॥ ೧ ॥ ॥ ೩೧೩ ॥

ಭೋಗಷಟ್ಪದಿ.

(ಧಾಟಿ—ಭಳಿರೆ ಪಾರ್ಥನಣುಗ ಸಿನ್ನ ॥ ಎಂಬಂತೆ.)

ಅರರೆ ದುಷ್ಟ ಭಟರೆ ಸುಮ್ಮ । ನಿರುವನೆಮ್ಮನೆಚ್ಚರದರ । ಪರಿಯ ನೋಡಿರೆನುತ ಬಹಳ । ಸರಳನೆಚ್ಚರು ॥ ಅರಿಗಳೊಡನೆ ಬಂದು ನಮ್ಮ । ಪುರವ ಮುಸುಕಲಂಜಿ ಸುಮ್ಮ । ಸಿರುವ ಖಳರು ನೀವೆನುತ್ತ । ಶರವನೆಚ್ಚರು ॥ ೧ ॥ ಖಳರದಲ್ಲದಿರ್ದ ಡಾಜಿ । ಗಳು ಕಿದವರನೋಡಿಸುವರೆ । ಫಲವನಿದಕೆ ತೋರ್ಪೆವೆಂದು । ಮುಳಿವು ತೆಚ್ಚರು ॥ ಸುಲಿಗೆಗಾರರಾದ ಜೀವ । ಗಳರೊಳಾವ ಧರ್ಮವವರ । ಬಳಿಯ ನಿಮಗೆ ತೋರ್ಪೆವೆನುತ । ಲಳುಕದೆಚ್ಚರು ॥ ೨ ॥ ಹೆಚ್ಚು ಮಾತು ಬೇಡೆನುತ್ತ । ಕಿಚ್ಚಿನಂದದಸ್ತ್ರಗಳನು । ಕೆಚ್ಚೆದೆಯಲಿ ಪಾರ್ಥನವರಿ । ಗೆಚ್ಚನದರೊಳು ॥ ಮೂರ್ಛೆಯಿಂದ ಬೀಳಲವರು । ಬೆಚ್ಚಿಯವರ ಭೃತ್ಯರೈದಿ । ಯುಚ್ಚರಿಸಿದರವನಿಪತಿಗೆ । ತಚ್ಚರಿತ್ರವಾ ॥ ೩ ॥ ॥ ೩೧೬ ॥

ರಾಗ ಮುಖಾರಿ, ಏಕತಾಳ.

(ಧಾಟಿ—ಲಾಲಿಸಿಕೇಳಿಂದ್ರಸಂಜಾತ ॥ ಎಂಬಂತೆ.)

ಪಾಂಚಾಲ ರಾಯ ಲಾಲಿಸೈಯ । ನಾವೆಂಬ ನುಡಿಯ । ಪಾಂಚಾಲ ರಾಯ ಲಾಲಿಸೈಯ ॥ ಪಲ್ಲ ॥ ಮಂತ್ರಿ ಮುಂತಾದ ವೀರರಿಂದು । ಸಂಗರಕ್ಕೈದಿ । ಪಂಥದಿ ಕಾದಿ ಕ್ಷಿತಿಯೊಳಂದು ॥ ಸಿಂತರಿವರ್ಗಗ ।

ಳಂತರಿದೊಟ್ಟಿದು । ರಂತನೃಪಾಲಕ ತಿಂಥಿಣಿಯೆಲ್ಲವ ॥ ನಂತಳು ವದೆ ಭವ । ನಾಂತಸ್ಥಲಪರಿ । ಯಂತವು ಬೆರಸಿದ । ರಿಂತಿದನಾ ಲಿಸು ॥ ೧ ॥ ಮತ್ತೊಂದು ತಂಡದಿದಿರಿಗೈದಿ । ಕೋಪದಲಿ ಮಂತ್ರಿ । ಸತ್ಯಜಿತ್ತುಗಳು ಬಿಡದೆ ಕಾದಿ ॥ ಅತ್ಯದುಭುತ ರಣ । ಕೃತ್ಯವನೆಸಗಿ ದು । ರಾತ್ರಿಕರೆಚ್ಚ ಮ । ಹಾಸ್ತ್ರಗಳಿರಿತವ । ನುತ್ತರಿಸದೆ ನಿ । ಶ್ಯಕ್ತಿಯೊಳಂಗವ । ತೆತ್ತರು ಧರಣಿಗೆ । ಸತ್ತವರಂದದಿ ॥ ೨ ॥ ॥ ೩೧೮ ॥

ಭಾಮಿನಿ.

ಪೊಡವಿಪತಿ ಕೇಳ್ಬಾರರಾಡಿದ । ನುಡಿಯು ಲಾಲಿಸಿ ಪ್ರಳಯ ಕಾಲದ । ವ್ಯಾಡನೊ ದ್ರುಪದನೊ ಹೇಳಲರಿದೆಂಬಂತೆ ಗರ್ಜಿಸುತ ॥ ಎಡಬಲವನೀಕ್ಷಿಸುತ ಖಂಡೆಯ । ವಿಡಿದು ಹೂಂಕರಿಸುತ್ತ ತಿರುಹುತ । ಗುಡುಗುಡಿಸಿ ಕಂಗಳಲಿ ಕೆಂಗಿಡಿಯುಗುಳುತಿಂತೆಂದ ॥ ೧ ॥ ॥ ೩೧೯ ॥

ರಾಗ ಕಾಂಬೋಧಿ, ಝಂಪೆತಾಳ.

ಅಕಟಕಟ ದುಷ್ಟಭಟ । ನಿಕರವಿನಿತೆಸಗಿದುದೆ । ವಿಕಟಬಲ ಮಂತ್ರಿ ಮತ್ಸುತರು ॥ ಸ್ವಕೃತ ರಣದೊಳಗೆ ನಿ । ಶ್ಯಕುತರಾದರೆ ಬಲಾ । ಧಿಕರಾದರೇ ವಿರೋಧಿಗಳು ॥ ೧ ॥ ಕಡಿವೆನರಿಗಳ ತಲೆಯ । ಹೊಡೆವೆನಹಿತರ ಪಡೆಯ । ಕೆಡಹುವೆ ರಥಾಶ್ವ ಕರಿಗಳನು ॥ ಪಿಡಿದಾಜಯಾತ್ರೀಯ । ಮುಡಿಯನೆಳತಂದು ಬಿಗಿ । ದಿಡುವೆನೀಸ್ತಂಭದೊಳಗಿನ್ನು ॥ ೨ ॥ ಜವನ ಧೂರ್ಜಟಿಯ ವಾ । ಸವನ ಧನದನ ರವನಾ । ಧವನ ಮರೆಹೊಗಲಿ ಸಲಹೆಂದು ॥ ತವಕದಲಿ ತಾಯ ಗ । ರ್ಭವನು ಹೊಕ್ಕರು ಶತ್ರು । ನಿವಹವನು ಬಿಡುವನಲ್ಲೆಂದು ॥ ೩ ॥ ಸುತ ತಿಖಂಡಿಯದಾವ । ಗತಿವಿಡಿದನೈದಲು । ನ್ನತ ಸೂತರಥರಥಾಶ್ವಗಳು ॥ ಚತುರಂಗಬಲವೆಲ್ಲ । ಜೊತೆಗೂಳಿಸಲೆಂದನಾ । ಕ್ಷಿತಿಪ

ನತ್ಯಂತ ರೋಷದೊಳು ॥ ೪ ॥ ಘುರವಾದ್ಯ ಜಯಭೇರಿ । ಮೊರೆಯುತ್ತೈ ಛತ್ರಾದಿ । ಸರುವ ಶೋಭೆಗಳೊದಗಲೀಗ ॥ ವರ ಚಾಪ ತೂಣೀರ । ಪರಿಪರಿಯ ಕೈದುಗಳು । ಬರಲೆನ್ನ ಬಳಿಗೆಂದನಾಗ ॥ ೫ ॥ ॥ ೩೦೪ ॥

ವಾರ್ಧಿಕ.

ಧರಣಿಪತಿ ಕೇಳ್ಬಳಿಕ ಚತುರಂಗಸೇನೆಯನು । ಪರಿಶಿತಾಭೂಪನಂ ಸಕಲ ಸನ್ನಾಹದಿಂ । ದರಸ ಸೇರಿದನಾವರೂಥವಮಂ ಜಯಜಯಘೃಣಿ ಮೊಳಗಲೆಡಬಲದೊಳು ॥ ಕರದ ಕಾರ್ಮುಕವನೊದರಿಸಲೊಡನೆ ಬಿಲ್ಮುರಿದು । ಭರದಿಂದ ನೂಕಿದಂತಾಗೆ ಧೊಪ್ಪನೆ ಧರಣಿ । ಗುರುಳಿ ಮೂರ್ಛಿತನಾದನಾದ್ರುಪದನೇನೆಂಬೆನೆಲ್ಲರುಂ ಬೆರಗಾಗಲು ॥ ೧ ॥. ॥ ೩೦೫ ॥

ರಾಗ ತೋಡಿ, ತ್ರಿಪುಟತಾಳ.

ಅವನಿಪತಿ ಕೇಳ್ಬಳಿಕ ಪರಿಜನ । ನಿವಹ ಮುಸುಕಿತು ನೃಪನನೀಕ್ಷಿಸೆ । ತವಕದಲಿ ಪೌರೋಹಿತನು ಬಂದು ॥ ಹವಣವರಿದವಗಮಲಮಂತ್ರಂ । ಬುವನು ತಳಿಯುತ್ತಿದ್ದ ಗುರುಪದ । ಕವನು ವಂದಿಸುತುಸುರಿದನು ನಿಂದು ॥ ೧ ॥ ಗುರುವರನೆ ಕೇಳಾಜಿಗೈದುವ । ಭರದಿ ರಥದಲಿ ಚಾಪವನು ಝೇಂ । ಕರಿಸಲಾಧನು ಮುರಿದುದಾಕ್ಷಣದಿ ॥ ಧರಣಿಗೆನ್ನನು ಹಿಡಿದು ನೂಕಿದ । ಪರಿಯೊಳಾಯಿತು ಬಿದ್ದೆನಾಸಿದ । ರಿರವನುಸುರೆನಲೆಂದನನುನಯದಿ ॥ ೨ ॥ ದ್ರುಪದ ಕೇಳೇನೆಂಬೆನಕಟಕ । ಟಪಶಕುನವಿದು ನೋಡಲಿದರಿಂ । ದಪಜಯವು ಸೇರುವದು ಸಮರದಲಿ ॥ ನಿಪುಲ ಭುಜಬಲಯುತರು ಬಂದಾ । ನೃಪರು ಸಂಧಿಯೊಳವರನುರೆ ಮ । ನ್ನಿಪುದು ನಿನಗಿದು ರೀತಿಯಿಂದಿನಲಿ ॥ ೩ ॥ ಕ್ಷಾತ್ರಧರ್ಮದೊಳಪಜಯದ ಹೇ । ತುತ್ವದಲಿ ನಾಮನೆ ಸಮಾಹಿತ । ವೃತ್ತಿಯೆನಲಾಮಾತನನುಸರಿಸಿ ॥

ಮತ್ತೆ ಗುರುಪದಕೆರಗಿ ರಥವನು । ಹತ್ತಿ ಶಸ್ತ್ರಾಸ್ತ್ರಂಗಳನು ಧರ್ರಿ ।
ಸುತ್ತ ನೃಪಸ್ತೈದಿದನು ಪಡೆವೆರಸಿ ॥ ೪ ॥ ॥ ೩೧೯ ॥

ಭಾಮಿನಿ.

ಕ್ಷಿತಿಪ ಕೇಳಾಪಾಂಡುರಾಯನ । ಸುತರು ಸೇನೆಯುನರ್ಥ ಚಂದ್ರಾ । ಕೃತಿಯೊಳಿರಿಸುತ ನಿಂದಿರಲು ನಿಜ ಧನುವನೊದರಿಸುತ ॥ ಹಿತವ ಬಯಸುವ ಮನದೊಳಾಜಿಯು । ಕೃತಿಯ ದರ್ಪವ ತೋರು ವವನೀ । ಪತಿಯು ಬರವನು ಕಂಡು ನುಡಿದನು ಪಾರ್ಥನನಿಲ ಜಗೆ ॥ ೧ ॥ ॥ ೩೨೦ ॥

ರಾಗ ಸೌರಾಷ್ಟ್ರ, ತ್ರಿಪುಟತಾಳ.

ಲಾಲಿಸಗ್ರಜ ಬರುವ ಭಟ ಪಾಂ । ಚಾಲನೆನ್ನುತ ತೋರ್ಪು ದವನ ವಿ । ಶಾಲ ಸನ್ನಾಹಗಳ ಲಕ್ಷಣ । ಲೀಲಗಳಲಿ ॥ ೧ ॥ ಈತನಧ ಟನು ಮುರಿದು ಕೊಲ್ಲದೆ । ರೀತಿಯಲಿ ಸೆರೆವಿಡಿದು ತಹೆನೆನ । ಲಾತ ನುಕ್ತಿಯು ಕೇಳಿ ಮಾರುತ । ಜಾತ ನುಡಿದ ॥ ೨ ॥ ತಾಳು ತಾಳ್ಕೈ ಪಾರ್ಥ ನಾನೇ । ಕಾಳಗದೊಳಾದುರುಳ ಭೂಪನ । ತೋಳ ಬಿಗಿದಪೆ ನೆಂದನಾಬಲ । ಶಾಲಿ ನರಗೆ ॥ ೩ ॥ ತಾ ನಿಲುವೆ ತಾ ನಿಲುವೆನೆನುತ ನಿ । ಧಾನ ತಮ್ಮೊಳಗಾಗದಾ ಯುಮ । ಸೂನುವಿಂಗೊಪ್ಪಿಸಿದರವರದ । ನೇನನೆಂಬೆ ॥ ೪ ॥ ತಿಳಿದುಸುರ್ದನು ಯುಮಜನರ್ಜುನ । ನಿಲಲಿ ಯುದ್ಧಕೆ ಭೀಮಸೇ ಬೆಂ । ಬಲಕೆ ನಿಲಲೆನೆ ಕೇಳಿ ಮಾರುತಿ । ಮುಳಿದುಸುರ್ದ ॥ ೫ ॥ ಧಿಟ್ಟನರ್ಜುನನಾದ ನಾನು ವಿ । ಶಿಷ್ಟ ಭಟರೊಳಗಾದೆನಾಗಲಿ । ಪಟ್ಟಣಕೆ ಪೋಗುವೆನು ನೇಮವ । ಕೊಟ್ಟು ಕಳುಹೈ ॥ ೬ ॥ ಹತ್ತು ಸಾವಿರ ಮದಗಜಂಗಳ । ಸತ್ವದವಗಿಂತೊರದೆ ನೀನೀ । ಹೊತ್ತಿನೊಳಗಿನ್ನೇನು ಪೋಪೆನೆ । ನುತ್ತ ನುಡಿದ ॥ ೭ ॥ ॥ ೩೩೭ ॥

ಕಂದಪದ್ಯ.

ಅವನಿಪ ಕೇಳಿಂತೆನುತಂ । ಜವದಿಂದ್ಭೈದುವ ಸವಿಾರಜನ ನೀಕ್ಷಿಸುತಂ ॥ ರವಿಸಂಭವ ಸಂಜಾತಂ । ತವಕದೊಳಡ್ಡೈಸಿ ನುಡಿದನತಿ ವಿನಯುದೊಳಂ ॥ ೧ ॥ ॥ ೩೩೮ ॥

ರಾಗ ಸೌರಾಷ್ಟ್ರ, ಅಷ್ಟತಾಳ.

ಏನಿದೇನಿದು ನಿನ್ನ ಕೋಪವೀದಿನದೊಳು । ತಮ್ಮ ಕೇಳು । ಗುಣ । ಹೀನರೆಂದೆಮ್ಮನು । ಹಳಿಯುದೆ ಜನವೆಲ್ಲ । ತಮ್ಮ ಕೇಳು ॥ ಹೀನ ಬಲಾಢ್ಯ ನೀನೆಂದು ನಾ ನುಡಿದೆನೆ । ತಮ್ಮ ಕೇಳು । ವರ್ತ । ಮಾನಕಾರ್ಯವನು ವಿ । ಚಾರಿಸಿ ಪೇಳ್ವೆನು । ತಮ್ಮ ಕೇಳು ॥ ೧ ॥ ವಂದೇ ಕಾರಿಯುವರ್ಜುನಂಗಾಯಿತಿದರೊಳು । ತಮ್ಮ ಕೇಳು । ಹಿಂದೆ । ಮುಂದಿನ ಹಲವು ಕಾರಿಯು ನಿನಗಾಯಿತು । ತಮ್ಮ ಕೇಳು ॥ ಇಂದು ನೀ ಪೋದರೇಂಗೈವನರ್ಜುನನೊಬ್ಬ । ತಮ್ಮ ಕೇಳು । ಇದ । ಹದವನರಿದು ನೀ । ನಿಂದು ಸೈರಿಸಬೇಕು । ತಮ್ಮ ಕೇಳು ॥ ೨ ॥ ॥ ೩೪೦ ॥

ಭಾಮಿನಿ.

ಪೊಡವಿಪತಿಯಾತೆರೆದಿ ತಮ್ಮನ । ನೊಡಬಡಿಸೆ ಫಲುಗುಣನ ಬೆಂಬಲ । ವಿಡಿದು ನಿಜ ಚತುರಂಗದಧಿಪತಿಯಾದನಾಭೀಮ ॥ ಎಡಬಲದ ಭೀಮಾದಿ ಸುಭಟರ । ಬಿಡಯುದಲಿ ಬೀಭತ್ಸು ಚಾಪವ । ನುಡಿಸುತಿರಲವನಿದಿರು ಬಂದಾದ್ರುಪದನಿಂತೆಂದ ॥ ೧ ॥ ॥ ೩೪೧ ॥

ರಾಗ ಭೈರವಿ, ಅಷ್ಟತಾಳ.

ಭಳಿರೆ ಬಾಲರೆ ನಿಮ್ಮನು । ಕಂಡರೆ ಮನ । ದೊಳಗಾಯ್ತು ಹರುಷವಿನ್ನು ॥ ತಿಳುಹುವದಾರ ಮು । ಕ್ಕಳು ನೀವೆಂಬುದ ನಿಮ್ಮ । ಬಲುಮೆಗೆ ಮೆಚ್ಚಿದೆನು ॥ ೧ ॥ ದ್ರುಪದನೆಂಬವನೆ ನೀನು । ಬಂಧುತ್ವಕೆ ।

ಸಫಲವಾಗಿಹ ಮಾತನು ॥ ವಿಪುಲ ಯುದ್ಧಕೆ ಬಂದು । ಕೃಪೆದೋರಿ ಪೇಳ್ವುಯಿ । ದಫಲವೆಂದನು ಪಾರ್ಥನು ॥ ೨ ॥ ಪ್ರತಿಕಾರ್ಯಭಾಗದೊಳು । ವಿಚಾರವೆ ಪ್ರಥಮ ಪರೀಕ್ಷಿಸಲು । ಕೃತಿಯೆಲ್ಲ ಕಡೆಯಲ್ಲಿ । ಹಿತದಿ ಪೇಳಿರಿ ನಿಮ್ಮ । ಪಿತನಾವ ನೃಪನೆಂದನು ॥ ೩ ॥ ಜನಪಾಲ ಪಾಂಡುವಿಗೆ । ನಾವಣುಗರ । ರ್ಜುನನೆಂಬ ಪೆಸರೆನಗೆ ॥ ಅನುಜಾಗ್ರಭವರಿವ । ರೆನುತವರಭಿಧಾನ । ವನು ಪೇಳ್ದನಾತನಿಗೆ ॥ ೪ ॥ ಪಾಂಡವರೇನೊ ನೀವು । ನಿಮ್ಮದು ಕೀರ್ತಿ ; ಗೊಂಡ ಚಂದ್ರಾನ್ವಯವು ॥ ಪುಂಡರಂದದಿ ಗರ್ವ । ಗೊಂಡಿಲ್ಲಿಗೇತಕೆ । ದಂಡಿಸಲ್ಕೆ ತಂದಿರಿ ॥ ೫ ॥ ಗುರುವಾಜ್ಞೆಯಲಿ ರಣಕೆ । ಬಂದೆವು ನಿನ್ನ । ಸೆರೆ ಪಿಡಿದೊಯ್ಯುವಕೆ ॥ ಘುರಕಿದಿರಾಗಿನ್ನು । ಬರಿಯ ಸಂಭಾಷಣೆ । ತರವಲ್ಲ ನಮಗೆಂದನು ॥ ೬ ॥ ॥ ೩೪೭ ॥

ರಾಗ ಶಂಕರಾಭರಣ, ಅಷ್ಟತಾಳ.

(ಧಾಟಿ—ಕರ್ಣಜಾತ ಕೇಳೋ ಮಾತ ॥ ಎಂಬಂತೆ.)

ಗುರುವಿನಾಜ್ಞೆಯಿರಲಿ ನೀವು । ತರಳರಲ್ಲ ನಿಮ್ಮ ರೂಪ । ಸರುವ ಲಕ್ಷಣಗಳ ಕಂಡು । ಹರುಷಗೊಂಡೆನು ॥ ಧುರದ ಗೊಡವೆ ಬೇಡ ಬಹಳ । ಪರಿಯ ವಿತ್ತ ರತ್ನಗಳನು । ತರಿಸಿಕೊಡುವೆ ನಿಮಗೆ ಸುಖದಿ । ತೆರಳಿರೆಂದನು ॥ ೧ ॥ ನಿನ್ನ ಕಾಯುವೆಂಬ ವಿತ್ತ । ವನ್ನು ಕೊಂಡು ಪೋಗಿ ಗುರಗ । ಳನ್ನು ಕಂಡು ಕೊಟ್ಟವರ್ಗೆ । ಧನ್ಯರಾಹೆವು ॥ ಅನ್ಯ ವಸ್ತುಗಳಲಿ ಪ್ರೀತಿ । ಯನ್ನು ಮಾಡೆವೆಂದು ಪಾರ್ಥ । ನೆನ್ನಲಾಗ ನೃಪತಿ ನುಡಿದ । ತನ್ನ ಮನದಲಿ ॥ ೨ ॥ ॥ ೩೪೮ ॥

ಭಾಮಿನಿ.

ಹಲವು ಪರಿಯಲಿ ನೋಡೆ ಸಮರವ । ನುಳಿಯರಿವರಿನ್ನಾವಗೇ ಭೂ । ತಳಪ ಸುಭಟರೊಳಾವನಾದರು ಬಂದರೊಬನಿಗೆ ॥

ಅಳುಕೆನಾಜಿಯೊಳೆಂಬ ಧೃತಿಯಿದೆ | ತಿಳಿಯಲದರಿಂದೊಂದುಪಾಯ
ದಿ | ಗೆಲುವೆನೀಪಾಂಡವರನೆನುತ ಕಿರೀಟಿಗಿಂತೆಂದ || ೧ || || ೩೫೦ ||

ರಾಗ ನಾದನಾಮಕ್ರಿಯ, ಅಷ್ಟತಾಳ.

(ಧಾಟಿ---ಎಲವೊ ಮರ್ಕಟನೆ ಗರ್ವದಿ ನೀನು ॥ ಎಂಬಂತೆ.)

ಎಲೆ ಪಾರ್ಥ ಕೇಳು ನೀ ತರಳನು | ಯೆಂದು | ಹಲವಂಗ
ದಲಿ ಪೇಳ್ದ ನುಡಿಯನು || ತಿಳಿಯದೆ ಗರ್ವಗೊಂಡಿಹೆ ನೀನು |
ಅಂಥಾ | ಬಲಿಯಾದರೊರವೆ ಕೇಳೊಂದನು || ೧ || ಎರಡು ಪಾಳ
ಯದ ವಿಗ್ರಹದಲಿ | ಯೇನೂ | ಪುರುಷಾರ್ಥವಿಲ್ಲದರಿಂದಲಿ ||
ಧುರವನುಳಿದು ನಿಲ್ಲುವೆಲ್ಲರು | ನಾವು | ಸರಿಯಾಗಿ ಸೆಣಸುವದೀ
ರ್ವರು || ೨ || ಸೋತ ಭಟನ ಸರ್ವ ಬಲಗಳು | ಸಹ | ಸೋತ
ವೆಂದಾಗಬೇಕಿದರೊಳು || ಖ್ಯಾತ ಪ್ರತಾಪಿಯಾದರೆ ನೀನು | ನಿಲ್ಲು |
ದೀತರದನುವರಕೆಂದನು || ೩ || ಅಳುಕುವೆಂದಕೆಂದು ಬಗೆದೆಯ |
ನಿನ್ನ | ಗೆಲುವುದಸಾಧ್ಯವೆಂದರಿದೆಯ || ಗಳಿಗೆಯೊಂದರಲಿ ನಾ
ನಿನ್ನನು | ಕಟ್ಟಿ | ಚಳಕದಿಂದಲಿ ಪಿಡಿದೊಯ್ವೆನು || ೪ || ಸೋತ
ನಾದರೆ ನಿನ್ನ ಧುರದೊಳು | ಕುಂತಿ | ಯಾತ್ಮಜನಲ್ಲೆಂದು ಖಿತಿ
ಯೊಳು || ಆತನಿಗೆಚ್ಚನು ನರನೆಂದು | ಆತ | ನೀತನಿಗೆಚ್ಚನು ನಿಲ್ಲೆಂ
ದು || ೫ || ಭೇರಿ ಪಟಹ ಶಂಖ ರವಗಳು | ಅಲ್ಲಿ ಭೋರುಗುಡಿಸಿ
ತವರೀರ್ವರು || ಸಾರಿ ಸೇನೆಯ ಸುಮ್ಮನಿರಿಸುತ್ತ | ತಾವು | ಹೋರಿ
ದರಸ್ತ್ರವ ಸುರಿಸುತ್ತ || ೬ || || ೩೫೬ ||

ರಾಗ ನೀಲಾಂಬರಿ, ರೂಪಕತಾಳ.

ವಾರಣ ಪುರಪತಿ ಕೇಳು ಭರ | ಧೀರರು ತವಕದಲಿ | ಓರಣ
ದಲಿ ಸೆಣಸಿದರು | ಬೈರಿದು ಖಾತಿಯಲಿ || ಪಲ್ಲ || ಅತ್ತಲು

ಮೂರ್ಛೆಯ ತಿಳಿದೇ | ಳುತ್ತಲ್ಲಿಗೆ ಬಂದರಿಗಳ | ಕತ್ತರಿಸುವೆ ವೆನಲರಸನ | ಮಾತ್ಯನು ನಂದನನು || ಹೊತ್ತಲ್ಲೆನುತೊದಗಿದ ರಣ | ಕೃತ್ಯವ ನೃಪ ನುಡಿದವರನು | ಹತ್ತರಿರಿಸಿಕೊಂಡಿಂದ್ರನ | ಪುತ್ರನ ತರುಬಿದನು || ೧ || ಬಡ ಹಾರುವನವನುಸುರಿದ | ನುಡಿಯನು ಮನ್ನಿಸಿ ಯೆನ್ನೊಳು | ತೊಡಗಿದೆಯುಮಹಾಜಿಯನಾಂ | ಬಿಡುವೆಸೆ ಕೇಳ್ನಿನ್ನ || ಕಡಿದೀರಣ ಭೂತಂಗಳ | ಗಡಣಕೆ ಬಲಿಕೊಟ್ಟಪೆನೆನು | ತೊಡಸೊಡನೌಡಗಿದೆಚ್ಚನು | ಪೊಡವಿಪನರ್ಜುನಗೆ || ೨ || ಕುಲದೊಳಗುತ್ತಮ ವಿದ್ಯಾ | ವಳಿಯುಲಿ ಬಲ್ಲಿದನಾಹವ | ದೊಳಗೆ ಕುಠಾರಿಗೆ ಮಿಗಿಲಾ | ಕಲಶಾತ್ಮಜನವನ || ಹಳಿವೆಯ ಬಲನೃಪ ನಿನ್ನನು | ಕಲಹಾಗ್ರದಿ ಬಿಗಿದೊಯ್ವೆನು | ಚಳಕದೊಳೆನುತೆಳೆದೆಚ್ಚನು | ಮುಳಿದರ್ಜುನ ನೃಪಗೆ || ೩ || ಭುಗುಭುಗಿಸುವ ಕೋಪಾಗ್ನಿಯ | ಹೊಗೆಯುಲಿ ಪಾರ್ಥನ ಕೂರಂ | ಬುಗಳನು ಕಡಿವುತ ಬಿರುಸರ | ಳುಗಳೆಸುತಿರೆ ನೃಪನು || ಝುಗಝುಗಿಸುತ ಬರುವರಿವಿಶಿ | ಖಗಳನು ತರಿತರಿದೊಟ್ಟುತ | ಹೊಗರೊಗುವಸ್ತ್ರವನರ್ಜುನ ತೆಗತೆಗೆದೆಸುತಿರ್ದ || ೪ || ಅಂದಿನಲೀಭಟರಾಹವ | ದಂದವನೀಕ್ಷಿಸಲೋಸುಗ | ವಿಂದ್ರಾದ್ಯರು ಪುಷ್ಪಕದಲಿ | ಬಂದಾಗಸದೊಳಗೆ || ಸಂದೇಹದೊಳಿದ್ದರು ಯಮ | ನಂದನ ಭೀಮರು ಪಾರ್ಥಗೆ | ಮುಂದೇನಪ್ಪುದೊ ಎನ್ನುತ | ಸಿಂದರು ಭೀತಿಯಲಿ || ೫ || || ೩೬೧ ||

ವಾರ್ಧಿಕ.

ಅವನಿಪತಿ ಶಿಖಿಶರವನರ್ಜುನಂ ವಾರುಣಾ | ಸ್ತ್ರವನಾತನ ಹಿತರವನೀತನುರಗಾರಿ ಬಾ | ಣವನವಂ ತಿಮಿರಾಸ್ತ್ರಮಂ ನರಂ ರವಿಶಿಖಿಯಮಂ ಮೇಘಶರವನವನು || ಇವನನಿಲ ಸಾಯಕವನವನದ್ರಿಶರವನ್ನಂ | ದ್ರವನೀತನಾತನಾಬ್ರಹ್ಮಾಸ್ತ್ರವೆಸಲು ವೈ |

ಷ್ಣುವಶರವನೆಚ್ಚಿಂತು ಪಾರ್ಥನಖಿಲಾಸ್ತ್ರಮಂ ಸಂಹರಿಸಲವನೆಂದನು ॥ ೧ ॥ ॥ ೩೬೨ ॥

ರಾಗ ಭೈರವಿ, ಏಕತಾಳ.

ಪೊತುರೆ ಬಾಲಕ ಎನ್ನಾ । ವಿ । ಖ್ಯಾತ ಶರೌಘವ ನಿನ್ನ ॥ ಚಾತುರ್ಯಗಳಲಿ ಕಡಿದೆ । ಎನು । ತಾತನಿಗೆಚ್ಚನು ಬಿಡದೆ ॥ ೧ ॥ ಬರುವ ಶರವನರ್ಜುನನು । ಕ । ತ್ತರಿಸುತ ಮದ್ರುರುಗಳನು ॥ ಜರೆದಿಹ ಪಾಪಾತ್ಮನಿಗೆ । ಜಯ । ವಿರದೆನುತೆಚ್ಚನು ನೃಪಗೆ ॥ ೨ ॥ ಕಿಂದಮಮುನಿ ಮಿಥುನವನು । ತಾಂ । ಕೊಂದದರಲಿ ತನ ಪಿತನು ॥ ಬೆಂದನು ಪಾಪಾತುಮನು । ಯಾ । ರೆಂದೆನುತೆಚ್ಚನು ನೃಪನು ॥ ೩ ॥ ಹರಿಣಾಂಗದ ಮಿಥುನವನು । ನೃಪ । ನರಿಯದೆ ಶರವೆಚ್ಚುದನು ॥ ಸ್ಮರಿಸದೆ ದೋಷವ ತೋರಿ । ನೀ । ಜರೆದರೆ ಬಿಡೆನವಿಚಾರಿ ॥ ೪ ॥ ನಾರೀ ಲಾಭದ ರಣಕೆ । ಮದ । ವೇರಿದು ಪೋಗುವನದಕೆ ॥ ಸೇರದ ಗಂಗಾಸುತನು । ಅವಿ । ಚಾರವಿದಾಗಿರದೇನು ॥ ೫ ॥ ಅನುಜೆಸಿಗೋಸುಗವವನು । ಅಂ । ಗನೆಯರ ಪಿಡಿತಂದುದನು ॥ ತನಗೋಸುಗವೆನಬೇಡ । ಅದ । ರನುಚಿಂತಿಸು ಬೆಲೆ ಮೂಢ ॥ ೬ ॥ ॥ ೩೬೪ ॥

ರಾಗ ಭೈರವಿ, ಅಷ್ಟತಾಳ.

ಜಾತಿಹೀನೆಯನು ಕಂಡು । ಶಂತನು ಭೂಪ । ನೋತನು ಭ್ರಮಣೆಗೊಂಡು ॥ ಈತರವಾದ ಕಾ । ಮಾತುರವಿದು ಮೂಢ । ರೀತಿಯಲ್ಲವೆ ಯೆಂದನು ॥ ೧ ॥ ಧರೆಯೊಳುತ್ತಮ ವೀರ್ಯದಿ । ಆವಘುಜನಿ । ಪಿರುವಳದನು ಮನದಿ ॥ ಅರಿಯದೆಮ್ಮವರನ್ನು । ಜರೆದೆಯಿಗರ್ವವ । ಮುರಿವೆ ನೋಡೆನುತೆಚ್ಚನು ॥ ೨ ॥ ಮತ್ತೆ ಸಾವಿರ ಶರದಿ । ಪಾಂಚಾಲ ರಥೋ । ತ್ತಮವನು ಭರದಿ ॥ ಎತ್ತಿದನಂಬರ । ದತ್ತಲು ಯೋಧರ । ವೊತ್ತವು ಬೆರಗಾಗಲು ॥ ೩ ॥ ॥ ೩೭೧ ॥

ಭಾಮಿನಿ.

ಆರಥವನುರೆ ಯೋಜನತ್ರಯು । ದೂರಪರಿಯಂತೆತ್ತಿ ಚಕ್ರಾ । ಕಾರದಲಿ ತಿರುಗಿಸಿ ಧರಾತಲಕಪ್ಪಳಿಸಲಾಗಿ ॥ ವೀರ ದ್ರುಪದನು ತಲೆತಿರುಗಿ ಯೆಂದೆ । ಹಾರಿ ಧೊಪ್ಪನೆ ಬಿದ್ದು ಮೂರ್ಛಿಸು । ತೋರ ಣದಿ ಚೇತರಿಸಿಕೊಂಡಿತೆಂದನರ್ಜುನಗೆ ॥ ೧ ॥ ॥ ೩೭೦ ॥

ವಾರ್ಧಿಕ.

ಭಾಪುರೆ ಶಭಾಸುರೆ ಯೆಲಾಪಾರ್ಥ ಮದ್ರಥವ । ನೀಪರಿ ಯೊಳೆಚ್ಚ ವರನೀಪ್ರೊಡವಿಯೊಳ್ಕಾಣೆ । ನಾಂಪೊಣರ್ದವರೊಳಾತಾಪ ಸದ್ರೋಣನಧ್ಯಾಪಕಂ ನಿನಗಲ್ಲವೆ ॥ ಆಪಾರುವನ ಸಿತನ ಚಾಪಾ ಸ್ತ್ರವಿದ್ಯಾ ಸ್ತ್ರ । ರೂಪಮಂ ನೋಡೆಂದು ಕೋಪದಿಂ ಬೊಬ್ಬಿ ರಿದು । ಭೂಪನಗಣಿತ ಸುಪ್ರತಾಪ ಶರಗಳಲೆಚ್ಚನಾಪಾಂಡವನ ತೇರನು ॥ ೧ ॥ ॥ ೩೭೩ ॥

ಭಾಮಿನಿ.

ಅರಸನತುಲ ಶರೌಘ ಪಾರ್ಥನ । ವರವರೂಥವನಭ್ರಕೆತ್ತಿತು । ನರಸಿಳೆಗೆ ದುಮ್ಮಿಕ್ಕಿ ಶರಗಳನೆಚ್ಚು ನಿಜರಥವ ॥ ಧರಣಿಗೆಳತಂ ದೇರ್ದು ದ್ರುಪದನ । ಕರದ ಧನು ರಥ ಸೂತಹಯಗಳ । ತರಿದು ಪುಡಿಪುಡಿಗೈದು ನುಡಿದನು ಮಿಗೆ ಪಚಾರಿಸುತ ॥ ೧ ॥ ॥ ೩೭೪ ॥

ರಾಗ ಪಂತುವರಾಳಿ, ಮಟ್ಟೆತಾಳ.

(ಧಾಟಿ--ಕೇಳಿರೈ ಸಹೋದರಾದ್ಯರು ॥ ಎಂಬಂತೆ.)

ಭಳಿರೆ ಭಳಿರೆ ಭೂಮಿಪಾಲನೇ । ಧೀರ ವೀರ । ಭಳಿರೆ ಭಳಿರೆ ಭೂಮಿಪಾಲನೇ ॥ ಪಲ್ಲ ॥ ಬಲ ಸಮರ್ಥ ನೀನು ನಿನ್ನ । ಬಲುಮೆ ಗಿದಿರು ನಿಲುವರಾರು ॥ ಅನುಪಲ್ಲ ॥ ಧುರಕೆ ನಿಂದೆ ಜರೆದೆಯೆನ್ನ । ಹಿರಿಯರನ್ನು ಮುಳಿದು ಮತ್ತೆ । ತೆರಳದೆನಗೆ ಸರಳನೆಚ್ಚೆ । ಯುರದಿ

ತೂಗಿತೆನ್ನ ಶಿರವು ॥ ಭಳಿರೆ ॥ ೧ ॥ ಕಲಶಜಾತನಯ್ಯಾಸಿಂದ । ಕಲಿತ ವಿದ್ಯೆಯಿನಿತೆ ಶೇಷ । ವುಳಿದುದೇನು ಪೇಳು ಮನದೊ । ಳಳುಕ ದೀಗಳೆನಗೆ ಬೇಗ ॥ ೨ ॥ ಬರಿದೆ ದಣಿವುದೇಕೆ ನಿನ್ನ । ಕರಗ ಳೆರಡನೀಡೊ ನಮ್ಮ । ಗುರುಗಳೆಡೆಗೆ ಕಟ್ಟಿಕೊಂಡು । ಭರದೊ ಳೊಯ್ಯು ಕೊಲದೆ ನಿನ್ನ ॥ ೩ ॥ ॥ ೩೭೭ ॥

ರಾಗ ಕಾಂಬೋಧಿ, ಝಂಪೆತಾಳ.

ಮುಳಿದು ನೃಪನೆಂದನೆಲೆ । ಫಲುಗುಣನೆ ನೀನೆನ್ನ । ಗೆಲಿದೆನೆಂ ದುಬ್ಬದಿರು ಜಗದ ॥ ಕಲಿಗಳೊಳಗೆನಗೆ ಭುಜ । ಬಲದೊಳೆಣೆಯಿಲ್ಲ ನೀ । ನಿಲು ಬಾಹು ಧುರಕೆಂದು ನುಡಿದ ॥ ೧ ॥ ಕೇಳುತ್ತ ಧನುಸುರಿದ ನೃ । ಪಾಲನಿಗೆ ಮಂತ್ರಿಯಿಾ । ಕಾಳಗದಿ ಕೇಡಹುದು ನಿನಗೆ ॥ ಕೋಲ ಗುರುವಿಗೆ ನಿನ್ನ । ತೋಳ ಬಿಗಿದೊಯ್ಯಲನು । ಕೂಲವಾಗುವದಿದ ರೊಳವಗೆ ॥ ೨ ॥ ಸರಳ ಕಾಳಗವ ಬಿಡ । ದಿರು ನಿನ್ನನದರಿಂದ । ಸೆರೆವಿ ಡಿಯೆ ಸಾಧ್ಯವಿಲ್ಲವಗೆ ॥ ತರಿಸುವೆ ರಥಾಶ್ವಾದಿ । ಸರುವ ಸಂಗ್ರಹವ ನೆನು । ತಿರೆ ಭೀಮ ನುಡಿದನರ್ಜುನಗೆ ॥ ೩ ॥ ತಡೆಯದಿರು ತಮ್ಮ ಸೆರೆ । ವಿಡಿವಡಿದು ಕಾಲನೀ । ಪೊಡವಿಪನನಿವನ ತೋಳ್ಗಳನು ॥ ತುಡುಕಿವನು ತರುಬಿದರೆ । ಕೆಡಹು ಭುಜಯುದ್ಧದಲಿ । ಮಿಡುಕ ಲೆಡೆಗೊಡದಿರವಗಿನ್ನು ॥ ೪ ॥ ಶರಚಾಪಗಳನಾಂತು । ಧುರಕೆ ನೃಪ ನೊದಗಿದರೆ । ಕಿರಿದಾಗದಾಜಿಯುದರಿಂದ ॥ ತ್ವರಿತದಲಿ ಬಿಗಿಯುವನ । ಕರವೆರಡನೆನೆಕೇಳ್ದು ಸುರಪನ ಕುಮಾರನಿಂತೆಂದ ॥ ೫ ॥ ॥ ೩೭೮ ॥

ಭೋಗಷಟ್ಪದಿ.

ಕೇಳು ಪೂರ್ವಜಾತ ಭೂಮಿ । ಪಾಲನಿಚ್ಛೆಯಂತೆ ಕಾದಿ । ತೋಳ ಬಿಗಿವೆನಿವನಪೇತ । ನಾಳುತನದಲಿ ॥ ಕಾಳಗಕ್ಕೆ ಬರಲಿ ಸಂಗ್ರ । ಹಾಳಿಯಿಂದಲಳುಕೆನೀ ನೃ । ಪಾಲಗೆಂದುನುಡಿದನಮರ ।

ಪಾಲಪುತ್ರನು ॥ ೧ ॥ ಅರಸನತ್ತ ಮಂತ್ರಿಯಿಂದ । ತರಿಸಿಕೊಂಡು ರಥರಥಾಂಗ । ಶರ ಧನುಸ್ಸುಗಳನು ಮತ್ತೆ । ಧುರಕೆ ನಿಂದನು ॥ ನರನದೆಲ್ಲವನು ಮಹಾಸ್ತ್ರ । ಸರಣಿಯಿಂದ ಕಡಿಯೆ ಮಂತ್ರಿ । ಭರದೊಳೊದಗಿಸಿದನು । ಪಾರ್ಥನರಿದನೆಲ್ಲವ ॥ ೨ ॥ ॥ ೩೮೪ ॥

ಭಾಮಿನಿ.

ನರನು ದ್ರುಪದನ ಮೂರು ಸಾವಿರ । ವರವರೂಥ ಧನುಸ್ಸುಗಳನೀ । ತೆರದಿ ಖಂಡಿಸೆ ಮಂತ್ರಿಯೊದಗಿಸಿ ದಣಿದನರ್ಜುನನು ॥ ಅರಸಗೈದಂಬುಗಳನೆಸಲವ । ನರುಣ ಜಲವನು ಕಾರಿ ಧರಣಿಯೊ । ಳೊರಗಿ ಚೇತನಗುಂದಿ ಹಲವಂಗದಲಿ ಶೋಕಿಸಿದ ॥ ೧ ॥ ॥ ೩೮೫ ॥

ರಾಗ ನೀಲಾಂಬರಿ, ಏಕತಾಳ.

ಅಕಟ ಈಬವರದೊಳು । ಕಂಗೆಟ್ಟೆನಲ್ಲ । ಸಕಲ ವಿಧಾನದೊಳು ॥ ಯುಕುತಿಯೆಲ್ಲವು ತೀರಿತು । ಈತನ ಗೆಲ್ವ । ಶಕುತಿಯಿಲ್ಲದೆ ಹೋಯಿತು ॥ ೧ ॥ ಲೋಕವೆಲ್ಲವನೊಮ್ಮೆಗೆ । ಗೆಲ್ಲುವ ಸತ್ವ । ವೀಕುಮಾರಕನೋರ್ವಗೆ ॥ ಸಾಕಾಗಲಿಲ್ಲವಲ್ಲ । ಯುದ್ಧದ ಭೀತಿ । ಸೋಕಿ ಕಂಗೆಟ್ಟೆನಲ್ಲ ॥ ೨ ॥ ಮಂತ್ರಿ ಸೇನಾನಿಗಳು । ಮಕ್ಕಳು ಬಲ । ವಂತ ಭಟಾಳಿಗಳು ॥ ಇಂಥವರಿರ್ದು ಹೀಗೆ । ಸಂಗತವಾಯಿ । ತಂತ್ರಕಾಲದೊಳೆನಗೆ ॥ ೩ ॥ ಯಾಕೆನ್ನ ಮನೆಯೊಳಂದು । ದ್ರೋಣನ ಬೈದು । ನೂಕಿದೆನಯ್ಯೋ ಇಂದು ॥ ಆಕಾರಣದಲಿ ನಾನು । ಕ್ರುಸೋತೆನೆಂದು । ಪಾಕಶಾಸನಿಗೆಂದನು ॥ ೪ ॥ ॥ ೩೮೬ ॥

ರಾಗ ನೀಲಾಂಬರಿ, ಆದಿತಾಳ.

(ಧಾಟಿ — ಮಗನೆ ನಿನ್ನ ಪೋಲ್ವರಾರು ॥ ಎಂಬಂತೆ.)

ವೀರ ಪಾರ್ಥ ಕೇಳು ಮಾತ । ಭಾರಿಯಾಜಿಗೈದು ॥ ತೀರಿಸೆದೆಲಾ ಯೆನ್ನ ಗತಿಯ । ನಾರಿಗೆಂಬೆನಿಂದು ॥ ೧ ॥ ನಿನ್ನ ದೆಸೆಯೊಳಿಂತು

ಸೊಂದೆ। ನಿನ್ನಾದಡೆಯು ನನಗೆ॥ ನಿನ್ನ ಮೇಲೆ ವೈರ ಜನಿಸ। ದೆನ್ನ ಲೇನು ನಿನಗೆ॥ ೨॥ ಏನಕೇಳ್ಪ ಯೆಸ್ನೊಳದನು। ದೈನ್ಯದಿಂದ ನಿನಗೆ॥ ನಾನು ಕೊಡುವೆನೆನ್ನ ಬಿಟ್ಟು। ನೀನು ಪೋಗು ಮನೆಗೆ॥ ೩॥ ಮರಣದಿಂದಲಧಿಕಮಾನ। ಹರಣಕಾರ್ಯ್ಯವಿದನು॥ ಅರಿದು ಕಾರು ಣ್ಯವನು ತೋರು। ಧುರದೊಳೆಂದನವನು॥ ೪॥ ॥ ೩೯೩॥

ಭಾಮಿನಿ.

ಕೇಳಿದನು ನರನರಸನುಕ್ತಿಯ। ತಾಳಿದನು ಕರುಣವನು ತನ್ಮನ। ಹೇಳಿತಾತಗೆ ಗುರುವಿನಾಜ್ಞೆಯುಲಂಘ್ಯವೆಂದೆನುತ॥ ಕಾಳಗಕೆ ನಿಲಲೊಂದುಪಾಯದೊ। ಳೇಳಿಸುವೆನೀತನನು ಜವದಲಿ। ತೋಳುಗಳ ಬಿಗಿದೊಯ್ವೆನೆನುತಾನೃಪತಿಗಿಂತೆಂದ॥ ೧॥ ॥ ೩೯೪॥

ರಾಗ ಸೌರಾಷ್ಟ್ರ, ತ್ರಿಪುಟತಾಳ.

ಕೇಳೆಲವೊ ಪಾಂಚಾಲ ಕೊಬ್ಬಿದ। ತೋಳಬಲವನು ತೋರ ದಳಲುವ। ಶೀಲವಿದು ಭೂಷಣವೆ ಭಟರಿಗೆ। ಹೇಳು ಬೇಗ॥ ೧॥ ಷಂಡನೋ ನೀ ಲಂಡನೋ ಮೇ। ಣ್ಬಂಡನೋ ಪಿಸ್ನರವನೀಕ್ಷಿಸಿ। ಗಂಡುಸೆಂಬರೆ ತಿಳಿಯಲೆಮ್ಮ। ತ್ತಂಡದವರು॥ ೨॥ ಗುರುವನುಜ್ಞೆ ಯುಲಂಘ್ಯವೆನಗಿ। ನ್ನರಸ ನೀನಳಲಿದರು ಕೇಳದೆ। ಕರವ ಬಿಗಿ ದೊಯ್ದಪೆನು ನಿನ್ನನು। ಭರದೊಳೆಂದಾ॥ ೩॥ ಎನಲು ಕೇಳುತ ದ್ರುಪದ ಖಾತಿಯೊ। ಳನುವರದೊಳಿನ್ನಾದುದಾಗಲಿ। ಯೆನುತಲೆ ದ್ದನು ಖಡುಗವಿಡಿದ। ರ್ಜುನಗೆ ನುಡಿದ॥ ೪॥ ॥ ೩೯೫॥

ರಾಗ ಸಾರವಿ, ಏಕತಾಳ.

ತರಳನೆ ಕೇಳೀ। ಧುರದಲಿ ಬಳಲಿದು। ಮರುಗಿದರೊಮ್ಮೆ ಯುಲಿ॥ ಜರಿದ್ವೆ ಯೆನ್ನನು। ಭರದಲಿ ತವಶಿರ। ವರಿವೆನು ಖಡುಗ

ದಲಿ ॥ ೧ ॥ ಫಡ ನೃಪ ನಿನ್ನೀ । ನುಡಿಯ ಮಹತ್ವವ । ಬಿಡಿಸುವೆ ನೀಗೆನುತಾ ॥ ಕಡಿದನು ಕಣೆಯಲಿ । ಪೊಡವಿಪನೆತ್ತಿದ ಖಡುಗವ ಕಲಿ ಪಾರ್ಥ ॥ ೨ ॥ ಗದೆ ಮುಸಲಾದ್ಯದ । ವಿಧವಿಧವಾದಾ । ಯುಧ ದಲಿ ಭೂಮಿಪನು ॥ ಒದಗಿದರರ್ಜುನ । ನದನೆಲ್ಲವ ಕಡಿ । ದಿದಿರಿ ನೊಳುರುಬಿದನು ॥ ೩ ॥ ಎಲೆ ಪಾರ್ಥನೆ ಭುಜ । ಬಲದಲಿ ನಿನ್ನನು । ಗೆಲುವೆನೆನುತ ನೃಪನು ॥ ಮುಳಿದಬ್ಬರಿಸಲು । ಫಲುಗುಣನಾತನೊ । ಳಳುಕದೆ ಹಳಚಿದನು ॥ ೪ ॥ ಸರಿಸರಿಯನಲ । ಬ್ಬರದಲಿ ಕಾದಿದ । ರುರವಣಿಸುತ ನಿಂದು ॥ ನರನತಿ ಯುಕ್ತಿಯೊ । ಳರಸನ ಬಿಡದಾ । ವರಿಸಿ ಹಿಡಿದನಂದು ॥ ೫ ॥ ॥ ೪೦೩ ॥

ವಾರ್ಧಿಕ.

ಧರಣಿಪನ ತೋಳ್ಗಳಂ ಬಿಗಿದರ್ಜುನಂ ರಥದೊ । ಳಿರಿಸೆ ಪಾಂಡವಸೈನ್ಯದೊಳ್ಳಂಖ ಭೇರ್ಯಾದಿ । ಸರುವ ಜಯವಾದ್ಯ ಮೊದರಿತು ಸುರಸುಮವೃಷ್ಟಿಗರೆದರರ್ಜುನನ ಮೇಲೆ ॥ ನರನ ಹಿತ ಸುಭಟರಂ ಕಂಡೆಮ್ಮ ಭಾಷೆಯೊಳ್ । ಧುರಕೆ ನಿಮಗಿಂಬಿಲ್ಲ ಮಾದೊಡಂ ಬನ್ನಿರೀ । ಧೊರೆಯ ಸೆರೆಯಂ ಬಿಡಿಸಲಾಪಡೆನ್ನುತ ಧನುವನೊದರಿಸಿದನತಿ ಧೃತಿಯೊಳು ॥ ೧ ॥ ॥ ೪೦೪ ॥

ರಾಗ ಭೈರವಿ, ತ್ರಿಪುಟತಾಳ.

ಕರಿಪುರೇಶ್ವರ ಕೇಳು ಫಲುಗುಣ । ನೊರೆದ ನುಡಿಯನು ಕೇಳಿಯಾಳ್ಗನ । ಹರಿಬಕೊದಗಿರಿ ಭಟರೆ ಬೇಗದಿ ॥ ಕರಿತುರಂಗ ಗಳ್ಳೈದಲಾತನ । ಸೆರೆಯ ಬಿಡಿಸುವರೆಂದು ದಶಸಾಸಿರಮದೇಭ ಮ । ಹಾಶ್ವಗಳು ಸಹಿ । ತುರವಣಿಸಿ ಸಚಿವಾದಿ ಬಲ ಬೊ । ಬ್ಬಿರಿದು ಪಾರ್ಥನ ತೇರ ಮುಸುಕಿತು ॥ ರೋಷದಿಂದ । ಜೀವ ನಿ । ರಾಶೆ ಯಿಂದ ॥ ೧ ॥ ಮುಸುಕುವರಿಚತುರಂಗ ಸೇನಾ । ಪ್ರಸರವನು ಕಲಿ

ಭೀಮು ಗದೆಯಿಂ । ದಹಿಯುಲಸ್ತ್ರದಲಂಘ್ರಿಯುಲಿ ಝಾ । ಡಿಸುತ
ದೆಸೆದೆಸೆಗಳಿಗೆ ತಿರುತಿರು । ಗಿಸುತ ಬಿಸುಡುತ ಬೆರಸುತಾ ರಣ ।
ವಸುಮತಿಯು ಬರಿಗೈದನಾ ವೋ । ಲಸಮ ಭುಜಬಲ ಪಾಂಡ
ವರು ಸಂ । ತಸದೊಳಾನಿಜ ಸೇನೆ ಸಹಿತಲಿ । ಬಂದರಾಗ ।
ನಿಜಪುರ । ಕಂದು ಬೇಗ ॥ ೨ ॥ ॥ ೪೦೬ ॥

ಭಾಮಿನಿ.

ಅತ್ತಲದರಿಂ ಮುನ್ನ ದ್ರುಪದನ । ಪುತ್ರನಾದ ಶಿಖಂಡಿ ಮೃಗ
ಯಾ । ವೃತ್ತಿಗೆನುತೈದಿಹನು ವಿಪಿನಕೆ ಶಬರ ಬಲ ಸಹಿತ ॥ ಕೃತ್ಯ
ವೆಲ್ಲ ವನವನು ಪೂರೈ । ಸುತ್ತ ಭೀಮನು ಬಿಸುಟ ಸೇನೆಯು । ಮೊತ್ತ
ನಭದಿಂದಿಳೆಗೆ ಬೀಳ್ವುದ ನೋಡುತಿಂತೆಂದ ॥ ೧ ॥ ॥ ೪೦೭ ॥

ರಾಗ ಘಂಟಾರವ, ಅಷ್ಟತಾಳ.

(ಧಾಟಿ—ಅಸುರಿಯೆಂದುದ ಕೇಳುತ್ತಲವನತಿ ॥ ಎಂಬಂತೆ.)

ಏನಿದೇನು ಮಹಾಶ್ಚರ್ಯವೀವನ । ಕಾನೆಗಳು ಮೋಣ್ ಸೇನೆ
ಯಭ್ರ । ಸ್ಥಾನದಿಂದಲಿ ಬೀಳ್ವುದು ॥ ಹಾನಿಯಲ್ಲದೆ ನಮಗಿದರಿಂದ
ಸು । ಮ್ಮಾನವಿಲ್ಲೆಂದಾನರೇಶ್ವರ । ಸೂನು ಜವದಲಿ ಪೊರಟನು ॥ ೧ ॥
ಬಂದು ತನ್ನಯ ಪಡೆ ಸಹಿತತಿಶಂಕೆ । ಯಿಂದ ಸಮರವ । ಸುಂಥ
ರಾಸ್ಥಲ । ದಂದವನು ಮಿಗೆ ಕಾಣುತ ॥ ಇಂದು ಭಾರಿಯು ಭಟರೆವ್ಮ
ಚತುರಂಗ । ಬೃಂದವೆಲ್ಲವ ಕೊಂದು ತೆರಳಿದ । ರೆಂದು ತೋರುವ
ದೆಂದನು ॥ ೨ ॥ ಎನುತ ಪಟ್ಟಣದೊಳಹೊಕ್ಕು ಸಭೆಯುಲ್ಲಿ । ಜನಪ
ನಿಲ್ಲದೆ ಜನರು ಬೊಬ್ಬಿಡು । ವನುವಪೇಕ್ಷಿಸಿ ನುಡಿದನು ॥ ಇನಿತು
ಶೋಕಿಪುದೇಕೆಲ್ಲಿ ಪೋದನು । ಜನಕನಿದನಿ । ನ್ನೆನಗೆ ಪೇಳುವ ।
ದೆನಲು ಚಾರಕರೆಂದರು ॥ ೩ ॥ ॥ ೪೧೦ ॥

ರಾಗ ವೃಂದಾವನ, ಏಕತಾಳ.

ಕೇಳು ಶಿಖಂಡಿರಾಯ | ನಾವೆಂಬ ನುಡಿಯ | ಕೇಳು ಶಿಖಂಡಿರಾಯ || ಪಲ್ಲ || ಪರರಾಯರ ಚತುರಂಗದ ಸೇನೆ | ಯೆರಡ್ಮೈ ತಂದುದು ಬವರಕೆ ತಾನೆ | ಧುರಕ್ಕೈದಿದ ನಿನ್ನನುಜನು ಬಲ ಸಹಿತ || ಮಂತ್ರಿಯನೊಡಗೊಳುತ || ಕೇಳು || ೧ || ಮೊದಲಿನ ತಂಡವನೆಲ್ಲವ ಗೆಲಿದು | ಕದನವನೆರಡನೆಯವರಲಿ ಹಿಡಿದು || ಮದವಳಿದವನಿಗೆ ಕೆಡೆದರು ಮೂರ್ಛೆಯಲಿ | ನಿಮ್ಮವರಾಜಿಯಲಿ || ಕೇಳು || ೨ || ಇಂತೀಪರಿಗಳನರಿವುತ ಬಳಿಕ | ನಿಂತನು ಸಮರಕೆ ನಿನ್ನಯ ಜನಕ | ಪಂಥದೊಳರಸನನೊಯ್ದರು ಸೆರೆವಿಡಿದು | ರಿಪುಗಳು ಬೊಬ್ಬಿರಿದು || ಕೇಳು ಶಿಖಂಡಿರಾಯ || ೩ || || ೪೧೩ ||

ಭಾಮಿನಿ.

ಚರರ ನುಡಿಗೇಳುತ್ತ ತನ್ನಯ | ಬೆರಳ ಮೂಗಿನಲಿಡುತ ಲೆಡಬಲ | ದಿರವ ನೋಡುತಲೊಡನೆ ಹೂಂಕರಿಸುತ್ತ ಖಂಡಯವ || ತಿರುಗಿಸುತೆ ಭುಗುಭುಗಿಸೆ ಕೋಪೋ | ತ್ಕರುಷಶಿಖಿಯು ಬ್ಬೇರಿಯುಕ್ಕಿಯೊ | ಳುರಿಯನುಗುಳುತ ಝಡಿದು ವೀರ ಶಿಖಂಡಿಯಿಂತೆಂದ || ೧ || || ೪೧೪ ||

ರಾಗ ಸೌರಾಷ್ಟ್ರ, ತ್ರಿಪುಟತಾಳ.

ಆರಕಟ ಬಂದೆಮ್ಮ ನಗರಿಯ | ಸೂರೆಗೊಂಡವನಿಪನ ಪಿಡಿದರು | ಭೂರಿ ಭುಜಬಲರಿದ್ದು ಬಿಟ್ಟಿರೆ | ವೈರಿಗಳಿಗೆ || ೧ || ಶತ್ರುಗಳು ಬಂದೆಮ್ಮ ಪುರಿಯನು | ಮುತ್ತಿ ತಂದೆಯನೊಯ್ದು ಕಾಲದಿ | ಸತ್ತು ಬಿದ್ದಿರೆ ನಿಮ್ಮ ಕಾರ್ಯ ವಿ | ಚಿತ್ರವಾಯ್ತು || ೨ || ಸಾಕಿದಾತನನಹಿತ ಭಟರಿಗೆ | ನೂಕಿಬಿಟ್ಟನ್ನಿದಿರೊಳಗ್ಗದ | ಶೋಕದಂಬೋಧಿಯಲಿ ಮುಳುಗಿಹು | ದೇಕೆ ನೀವು || ೩ || ಕಡಿವೆನೋ

ನಾವೀಗ ನಿಮ್ಮನು । ನಡೆವೆನೋ ವೈರಿಗಳನರಸುತ । ನುಡಿವರಾ ರೆನಗಾವ ಕಾರ್ಯವ । ತೊಡಗಲೆಂದು ॥ ೪ ॥ ಹೇಳಿ ಫಲವಿಲ್ಲ ಕಟ ವೈರಿಭ । ಟಾಳಿಯೆಲ್ಲಿದೆ । ಪೋಪೆವಾಸ್ಥಲ । ಕೇಳಿರೆಲ್ಲರು ಸರ್ವ ಸೇನಾ । ಜಾಲ ಸಹಿತ ॥ ೫ ॥ ॥ ೪೧೯ ॥

ರಾಗ ಆಹೇರಿ, ಝಂಪೆತಾಳ.

(ಧಾಟಿ—ಸಮರಕನುವಾಗೆದ್ದರಾಗ ॥ ಎಂಬಂತೆ.)

ಯುದ್ಧಕನುವಾದನಾವೀರ । ಕಾಲ । ರುದ್ರನಂತಾರ್ಭಟಿಸು ತರಸನ ಕುಮಾರ ॥ ಪಲ್ಲ ॥ ಕಡುಗಿ ಚತುರಂಗ ಬಲ । ದೊಡನೆ ಮಣಿಮಯ ರಥವ । ನಡರಿ ಶರ ಚಾಪಗಳ । ಪಿಡಿದು ಝೇಂಕರಿ ಸುತ್ತ । ಝಡಿದು ಪಾಂಡವರ ಪಡೆ । ನಡೆದ ಪಥವಿಡಿದೈದಿ । ತಡೆ ದಾಸಮಸ್ತ ಸೇನೆಯನು । ಸರಳ । ನೆಡೆಬಿಡದೆ ತೆಗೆದೆಸುತ । ಹಿಡಿದ ನಾಜಿಯನು ॥ ೧ ॥ ॥ ೪೨೦ ॥

ವಾರ್ಧಿಕ.

ಕಡುಗಿ ಬೊಬ್ಬಿಡುತೆರಡು ಪಡೆ ಬಳಿಕ ಗುಡುಗುಡಿಸಿ । ನಿಡು ಸರಳ್ಗಿಡಿದಲ್ಲಿ ನಡೆ ಬೇಗ ಬಿಡಬೇಡ । ಬಡಿಯುವನ ಹೊಡೆಯುವನ ತುಡುಕು ಜವಗೆಡದೊದಗು ಪಿಡಿಯುದಿರ್ತಡಿಯೆನ್ನುತ ॥ ಅಡಿಗಡಿಗೆ ಝಡಿದು ಪಲ್ಲಡಿದೊಡನೆ । ಕಡಿದಾಡ ತೊಡಗಲಾ ಪೊಡವಿಪನ ಹುಡುಗನುಗ್ಗಡದ ಖತಿ । ನಿಡಿದಹಿತರೊಡಲುಗಳ ನೊಡೆಯೆಸುತ ಕಿಡಿಗೆದರಿ ನುಡಿದನತಿ ದೃಢಮತಿಯೊಳು ॥ ೧ ॥ ॥ ೪೨೧ ॥

ರಾಗ ಶಂಕರಾಭರಣ, ಮಟ್ಟೆತಾಳ.

ಎಲ್ಲಿಗೊಯ್ದಿರೆಲವೊ ಖಲರೆ ಯೆನ್ನ ತಾತನ । ಒಳ್ಳಿತಲ್ಲ ಸಿಮಗೆ ಬಿಟ್ಟು ಪೋಗಿರೀತನ ॥ ಅಲ್ಲದಿರ್ದರಸ್ತ್ರಶಸ್ತ್ರಗಳಲಿ ನಿಮ್ಮ ನು । ಕೊಲ್ಲೆನೆನುತಲೆಚ್ಚನವನನೇಕ ಶರವನು ॥ ೧ ॥ ಆತನಸ್ತ್ರಗಳಲಿ

ಪಾಂಡುಸುತರ ಸುಭಟರು । ಧಾತುಗೆಟ್ಟು ಧರಣಿತಲದೊಳುರುಳು ತಿರ್ದರು ॥ ಖಾತಿಯಿಂದ ದ್ರುಪದಸುತನು ಮುಂದುವರಿವುತಾ । ಪಾರ್ಥಗಿಂತು ನುಡಿದ ಸರಳ ಮಳೆಯುಗರೆವುತಾ ॥ ೨ ॥ ॥ ೪೨೩ ॥

ಭಾಮಿನಿ.

ಫಡಫಡೆಲೆ ಮತ್ತಿತನ ಸೇರಿಯನು । ಬಿಡು ದುರಾತ್ಮಕ ನಿನಗೆ ಪೋಗಲು । ಬಿಡುವೆನೇ ಯೆನುತೆಚ್ಚನರ್ಜುನಗಪರಿಮಿತ ಶರವಾ ॥ ತಡವನೇ ಕಲಿ ಪಾರ್ಥನಸ್ತ್ರವ । ತುಡುಕುವನಿತರೊಳ ನಿಲಸುತನು । ಗದ್ಗದ ಕೋಪದಿ ಮೇಲ್ಮುವಾಯ್ದು ಶಿಖಂಡಿಗಿಂ ತೆಂದ ॥ ೧ ॥ ॥ ೪೨೪ ॥

ರಾಗ ಭೈರವಿ, ಅಷ್ಟತಾಳ.

ಎಲೆ ನಪುಂಸಕನೆ ಕೇಳು । ಭಾರಿಯ ಭುಜ । ಬಲದವರಿಂದೆ ಮ್ರೊಳು ॥ ಅಳುಕಿದರೀಗ ದು । ರ್ಬಲನಾದ ನೀನೇತ । ಕಳಿವೆ ಬಂ ದೆನುತೆಚ್ಚನು ॥ ೧ ॥ ಷಂಡನಾಗಿರುವ ನಾನು । ಪಿತನ ಕಟ್ಟ । ಕೊಂಡುಪೋಗುವ ನಿಮ್ಮನು ॥ ದಂಡಿಸಿ ಕಡೆಯಲ್ಲಿ । ಗಂಡೂಹೆ ನೆಂದು ಶಿ । ಖಂಡಿ ಬೊಬ್ಬಿರಿದೆಚ್ಚನು ॥ ೨ ॥ ಆಧೀರತನವನೀಗ । ತೋರಿಸು ನೋಳ್ಪೆ । ನೀಧುರದೊಳಗೆ ಬೇಗ ॥ ಖೇದವಿಲ್ಲೆಂದು ವೃ । ಕೋದರನಾತಗೆ । ಹೊಯ್ದನು ಗದೆಯಿಂದಲಿ ॥ ೩ ॥ ಜಾಣ ತನದೊಳದನು । ತಪ್ಪಿಸಿಕೊಂಡು । ಕೇಣದಿ ನೃಪಸುತನು ॥ ತ್ರಾಣದಿಂದೆಳದೊಂದು । ಬಾಣವನಾ ಜಗ । ತ್ಪ್ರಾಣನ ಸುತಗೆಚ್ಚನು ॥ ॥ ೪ ॥ ಶರಹತಿಯಲಿ ಭೀಮನು । ವ್ಯೊಮುರದು ಚೇ । ತರಿಸಿಕೊಂ ಡದ್ದು ತಾನು ॥ ಭರಿತ ರೋಷದೊಳಾತನುರವನು ಗದೆವಿಡಿ । ದೆರಗಿ ದನುರವಣಿಸಿ ॥ ೫ ॥ ॥ ೪೨೫ ॥

ವಾರ್ಧಿಕ.

ಮರುತಜನ ಹತಿಯೊಳಾನೃಪಸುತಂ ಮೂರ್ಛೆಯಿಂ। ದೊರಗಲಾತನ ಸೈನ್ಯಮಂಜಿ ನಿಜಪುರಿಗೈದ। ಲರಸ ಕೇಳ್ಪಾಂಡವರು ಪಡೆವೆರಸಿ ನಡೆತಂದರಿಭಪುರಿಗೆ ವಹಿಲದಿಂದ ॥ ತರುಣಿಯರ ಮಂಗಳಾರತಿಗಳಂ ಕೈಕೊಳುತ। ಪರಮ ಸಂತೋಷದಿಂ ಘಲುಗುಣಂ ದ್ರುಪದನಂ। ಗುರುಚರಣದೊಳ್ ಕೆಡಹಿಯನುಜಾಗ್ರಜರ್ಸಹಿತ ತತ್ಪದಕೆ ವಂದಿಸಿದನು ॥ ೧ ॥ ॥ ೪೩೦ ॥

ಕಂದಪದ್ಯ.

ಅಡಿಗೆರಗಿದ ಪಾಂಡವರಂ। ಪಿಡಿದಾಶೀರ್ವಾದಪೂರ್ವಕದೊಳೆತ್ತುತ್ತಂ॥ ತಡೆಯದ ಸಂತೋಷದೊಳಂ। ಕೊಡನಣುಗಂ ಶ್ವೇತವಾಹನಂಗಿಂತೆಂದಂ॥ ೧ ॥ ॥ ೪೩೧ ॥

ಭಾಮಿನಿ.

ಪಿಡಿದುತಂದ್ಯೆ ಖಳನನೆನ್ನಯ। ನುಡಿಯ ಪಾಲಿಸಿದ್ಯೆ ಸುಕೀರ್ತಿಯ। ಪಡದು ಶೋಭಿಸು ಮೂರು ಲೋಕದಿ ವೀರನಾಗೆನುತ॥ ಎಡದ ಕೈಯಲಿ ನೃಪನ ಮುಂದೆಲೆ। ವಿಡಿದು ಬಲಗೈಯಿಂದ ಭಾರಿಯ। ಖಡುಗವನು ಝಳಪಿಸುತಲಾಪಾಂಚಾಲಗಿಂತೆಂದಾ ॥ ೧ ॥ ॥ ೪೩೨ ॥

ರಾಗ ತೋಡಿ, ಅಷ್ಟತಾಳ.

(ಧಾಟಿ—ಜಾಣನಹುದೆಲವೋ ॥ ಎಂಬಂತೆ.)

ಧೀರನಹುದೆಲವೋ। ಪಾಂಚಾಲನೆ। ಧೀರನಹುದೆಲವೊ॥ ॥ ಪಲ್ಲ ॥ ಧಾರುಣಿಯೊಳು ನಿನಗೆಣೆಯಿಲ್ಲ ನೃಪರೊಳು॥ ಅನುಪಲ್ಲ॥ ಮಿತ್ರನಾಗಿರುವೆ ನೀನೆಂದು। ಪತ್ನೀ। ಪುತ್ರ ಸಮೇತ ನಾನಂದು ॥ ಹೊತ್ತ ದಾರಿದ್ರ್ಯವ। ನುತ್ತರಿಸುವೆನೆಂಬ। ಚಿತ್ತದಿ ನಿನ್ನಲ್ಲಿಗೆ॥ ಬಂದರೆ ನಿನ್ನ। ಶಕ್ತಿಯ ಮಿೂರ್ದೆನಗೆ। ಐಶ್ವರ್ಯವ। ನಿತ್ತೆಯಲ್ಲವೆ

ನಿನಗೆ । ಮೆಚ್ಚಿದೆ ಬಹು । ಧೀರನಹುದೆಲವೊ ॥ ೧ ॥ ಪ್ರೊಡನಿಯು
ರ್ಥವ ನೀವೆನೆಂದು । ನಿನ್ನ ನುಡಿಯಿದ್ದರ್ಶ ವಿಾದರ್ಶ ನೀನೆಂದು ।
ಪ್ರೊಡವಿಪಾಲಕರಿಗೆ । ಬಡ ಹಾರುವರಸಖ್ಯ । ವಿಡುವುದು ರೀತಿ
ಯಲ್ಲ । ಯೆಂದೆನ್ನೊಳು । ನುಡಿದು ಗರ್ವಿಸಿದೆಯಲ್ಲ । ತತ್ಫಲ
ವನ್ನು । ಪಡದೆಯೆಂದಾದೆಯಲ್ಲ । ಮೆಚ್ಚಿದೆ ಬಹು । ಧೀರನಹುದೆ
ಲವೋ ॥ ೨ ॥ ಸೊಕ್ಕಿನ ಮಾತುಗಳಾಡಿ । ಸಣ್ಣ । ಮಕ್ಕಳ ಕೂಡೆ
ಹೊಯ್ದಾಡಿ । ಸಿಕ್ಕಿದೆಯಲ್ಲ ನೀ । ನಕ್ಕಟ ನಿನ್ನನು । ಘಕ್ಕನೆ ಕಡಿ
ದರಿಂದು । ಕೇಳುವರಾರು । ಟಕ್ಕನೆ ಪೇಳೋ ನಿಂದು । ಐಶ್ವ
ರ್ಯವೊ ಸೊಕ್ಕೊ ಮತ್ತಾವುದೆಂದು । ಮೆಚ್ಚಿದೆ ಬಹು । ಧೀರನಹು
ದೆಲವೋ ॥ ೩ ॥ ॥ ೪೩೫ ॥

ರಾಗ ಕಾಂಬೋಧಿ, ಝಂಪೆತಾಳ.

ಮಂದಮತಿ ಕೇಳಿನ್ನು । ಮುಂದೆ ನಿನ್ನಿಳೆಯೆಲ್ಲ । ಬಂದ
ದಿಂದೇನಗಾಯ್ತು ನಿನಗೆ ॥ ಅಂದು ನಾನುಡಿದ ನುಡಿ । ಸಂದುದೇ
ಪೇಳೀಗ । ಳಿಂದು ಹೆದರುವುದೇಕೆ ನನಗೆ ॥ ೧ ॥ ಹಾರುವರೊ?
ಭೂಮಿಪರೊ? । ಸಾರವಿದ್ಯೆಯೊ? ಧನವೊ? । ಯಾರಧಿಕರಾವುದು
ತ್ತಮವು ॥ ಧಾರುಣಿಯೊಳೆಂಬುದಿದು । ತೋರಿತೇ ಪೇಳೆನುತ ।
ಲೋರಂತೆ ಜರೆದನಾತನನು ॥ ೨ ॥ ನುಡಿದು ಫಲವೇನಿನ್ನು । ಸುಡು
ನಿನ್ನ ಬಾಳ್ವೆಯನು । ಬಿಡುವೆ ನಿನಗರ್ಧರಾಜ್ಯವನೂ ॥ ಒಡಲ
ಹೊರಕೊಳ್ಳೆನುತ । ಝಡಿದು ನೂಕಿದನು ತ । ನ್ನಡಗಾಲೊಳೊದ್ದು
ಭೂಪನನೂ ॥ ೩ ॥ ॥ ೪೩೬ ॥

ವಾರ್ಧಿಕ.

ಅರಸ ಕೇಳಾನೃಪಂ ಸತ್ತ್ರ ಬಾಳಿಕೆಯಿಂದ । ತೆರಳಿದಂ ಬಳಿ
ಕಾತ ನಗರಿಯಂ ಸೇರದ । ಧ್ವರದೊಳಾ ದ್ರೋಣನಂ ಕೊಲುವ
ಸುತನಂ ಪಾರ್ಥಗರಸಿಯುಹ ನಂದನೆಯನೂ ॥ ತರದಿಂದ ಪಡೆದು

ಧೃಷ್ಟದ್ಯುಮ್ನ ಕೃಷ್ಣೆಯಿಂ। ಬೆರಡು ಸಂಜ್ಞೆಯನವರ್ಗಿಟ್ಟುಕೊಂ
ಡೈದಿ ನಿಜ। ಪುರಿಗರ್ಧರಾಜ್ಯವಂ ದ್ರೋಣಂಗೆ ತೆತ್ತುಳಿದ ಧರೆಯ
ನಾಳುತ್ತಿರ್ದನೂ ॥ ೧ ॥ ಅತ್ತಲಾ ಭೀಮಾರ್ಜುನರ್ಬಳಿಕ ಸಕಲ
ದೇ। ಶಸ್ಥ ನೃಪರಂ ಗೆಲ್ದು ಕಪ್ಪವಂ ಕೊಂಡು ನಿಜ । ಪತ್ತನಕೆ
ಬಂದರಾಮೇಲೆ ಭೀಷ್ಮ ದ್ರೋಣ ಮುಂತಾದ ಧೀಮಂತರು ॥
ಸತ್ವಸಂಪನ್ನರನಿಲಜ ಪಾರ್ಥನಂತಕನ। ಪುತ್ರನೇ ಜ್ಯೇಷ್ಠನೆಲ್ಲ
ರೊಳೆನುತ್ತಾತಂಗೆ। ಹಸ್ತಿನಾವತಿಯ ಯುವರಾಜಪಟ್ಟವನ್ನಿದೆ ಕಟ್ಟಿ
ದರ್ ಸುಕ್ರಮದೊಳು ॥ ೨ ॥ ಪಕ್ಷೀಂದ್ರವಾಹನನ ಪರಿಪೂರ್ಣ
ಕೃಪೆಯಿಂ ವಿ। ಪಕ್ಷಮಾತಂಗ ಪಂಚಾಸ್ಯ ಗಂಗಾತ್ಮಜನ। ರಕ್ಷೆ
ಯಿಂದಖಿಳ ರಾಜರ್ಗಧೀಶ್ವರರೆನಿಸಿಕೊಂಬ ಗಾಂಭೀರ್ಯತರದ ॥
ಲಕ್ಷಣದೊಳಭಿವರ್ಧಿಸುತ ಮಾತೆ ಸಹಿತ ಪಾಂ । ಡುಕ್ಷಿತಿಪತನು
ಜರಿರುತಿರ್ದರಾನಗರದೊಳ್ । ಸುಕ್ಷೇಮದಿಂದೆನುತ ಜನಮೇಜ
ಯಂಗೆ ವೈಶಂಪಾಯನಂ ಪೇಳ್ದನು ॥ ೩ ॥ ಇಂತೊರದ ಪುಣ್ಯ ಕಥೆ
ಯಂ ಭರದ್ವಾಜಮುನಿ। ಸಂತತಿಜ ಶಂಭುಸಂಜ್ಞಕ ಸುತ ಹಿರಣ್ಯಾಶ।
ರ್ಮಾಂತರದೊಳಖಿಳ ಜನರರಿವಂತೆ ಕರ್ನಾಟ ಯಕ್ಷಗಾನ ಕ್ರಮ
ದೊಳು। ದಂತಿಗುಣವಸುರಸಾ ಶಕವರ್ಷದೊಳ್ ರಚಿಸಿ। ದಂತಿರೆಯೊ
ಳೀಕೃತಿಯನೋದಿ ಕೇಳ್ವರನೊಲಿದು। ಸಂತತಂ ಸಲಹುವಂ ಸುಖ
ವಿತ್ತು ಬಹುಲಪುರಪತಿ ಮಹಾಲಿಂಗೇಶನೂ ॥ ೪ ॥ ॥ ೪೪೨ ॥

ರಾಗ ಮಂಗಲಪದ, ಏಕತಾಳ.

ಬಾಲನಿಶಾಕರ ಶೇಖರಗೆ । ಕಾಲಾಂತಕ ಕರುಣಾಕರಗೇ ।
ಫಾಲಾಂಬಕನಿಗೆ ಪರಮಾತ್ಮಕನಿಗೆ । ನೀಲಗ್ರೀವಗೆ ನಿರ್ಮಲಗೆ ॥
ಮಂಗಲಂ ಜಯ ಮಂಗಲಂ ॥ ೧ ॥ ದಿನಕರಕೋಟಿ ವಿಭಾಕರಗೆ ।
ಘನ ದುರಿತಾತ್ಮಕ ಭೀಕರಗೆ ॥ ಮನುಮಥವೈರಿಗೆ ಮಹದಾಕಾರಗೆ ।

ಜನಿಮೃತಿರಹಿತಗೆ । ಜನನುತಗೆ ॥ ಮಂಗಲಂ ಜಯ ಮಂಗಲಂ ॥ ॥ ೨ ॥ ಮಂಗಲಮಗಜಾನಾಯಕಗೆ । ಮಂಗಲಮಿಷ್ಟವಿದಾಯಕಗೆ ॥ ಮಂಗಲಮುತ್ತಮ ಬಹುಲಪುರೇಶಗೆ । ಮಂಗಲಮುನ್ನತಲಿಂಗನಿಗೆ ॥ ಮಂಗಲಂ ಜಯ ಮಂಗಲಂ ॥ ೩ ॥ ॥ ೪೪೫ ॥

ಇಂತು ಸಂಧಿ ೧ಕ್ಕೆ ಪದ ೪೪೫ಕ್ಕಂ ಮಂಗಲಮಸ್ತು.

ಪಾಂಡವವಿಜಯೋ ನಾಮ ಪ್ರಸಂಗಃ

ಸಂಪೂರ್ಣಃ.

॥ ಶ್ರೀಕೃಷ್ಣಾರ್ಪಣಮಸ್ತು ॥



ಈ ಪುಸ್ತಕವು ಪಾವಂಜೆ ಗುರುರಾವ್, ಇವರ ಉಡುಪಿ ಶ್ರೀಕೃಷ್ಣಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟು, ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯದಿಂದ ಪ್ರಕಟಿಸಲ್ಪಟ್ಟಿತು. ಶಾ. ಶಕ ೧೮೪೭. 1925.

# ಕನ್ನಡಲಿಪಿಯ ಪ್ರಸಂಗಪುಸ್ತಕಗಳು.

| | | | | ಆಣೆ. |
|---|---|---|---|---|
| ಸಮುದ್ರಮಥನ | ... | ... | ... | ೪ |
| ವಿಶ್ವಾಮಿತ್ರಪ್ರತಾಪ | ... | ... | ... | ೬ |
| ದ್ರೌಪದಿಪ್ರತಾಪ | | ... | ... | ೬ |
| ಸುಬಾಹುಕಾಳಗ | ... | ... | ... | ೬ |
| ಹರಿಶ್ಚಂದ್ರಚರಿತ್ರೆ | ... | ... | ... | ೪ |
| ಶಕುಂತರಾಜಚರಿತ್ರೆ (ರಾಮಾಂಜನೇಯಕಾಳಗವು) | | | ... | ೨ |
| ಸೀತಾವಿಜಯ (ಸಹಸ್ರಕಂಠರಾವಣನ ಕಾಳಗವು) | | | ... | ೨ |
| ಸುಧನ್ವಕಾಳಗವು | ... | ... | ... | ೪ |
| ಇಂದ್ರಜಿತುಕಾಳಗ | ... | ... | ... | ೧ |
| ಘಟೋತ್ಕಚನ ಕಾಳಗ | ... | ... | | ೩ |
| ಸುಂದರಕಾಂಡ | ... | ... | | ೨ |
| ಕನಕಾಂಗೀಕಲ್ಯಾಣ | ... | ... | | ೪ |
| ಚಂದ್ರಾವಳೀಪ್ರಸಂಗ | ... | ... | ... | ೩ |
| ಕುಶಲವರ ಕಾಳಗ | ... | ... | ... | ೩ |
| ಕಂಸಾಸುರವಧೆ | ... | ... | ... | ೩ |
| ಅನಸೂಯಾ ಧ್ರುವಕಥೆ | ... | ... | ... | ೪ |
| ಭೀಷ್ಮವಿಜಯ | ... | ... | ... | ೫ |
| ಪ್ರಹ್ಲಾದಚರಿತ್ರೆ | ... | ... | ... | ೩ |
| ತಾಮ್ರಧ್ವಜನ ಕಾಳಗ | ... | ... | ... | ೩ |
| ಕರ್ಣಾರ್ಜುನರ ಕಾಳಗ | ... | ... | ... | ೪ |
| ಕೃಷ್ಣಾರ್ಜುನರ ಕಾಳಗ | ... | ... | ... | ೪ |
| ಅಯೋಧ್ಯಾಕಾಂಡ (ಪಟ್ಟಾಭಿಷೇಕ) | | ... | ... | ೪ |
| ರಾವಣೋದ್ಭವ | ... | ... | ... | ೩ |
| ಜಲಂಧರನ ಕಾಳಗ | ... | ... | ... | ೩ |
| ಮೈರಾವಣಕಾಳಗ | ... | ... | ... | ೩ |
| ಮದನಾಂಗೀಕಲ್ಯಾಣ | ... | ... | ... | ೫ |

**ಪಾವಂಜೆ ಗುರುರಾವ್,**

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ, ಉಡುಪಿ.